<table>
<tr><th rowspan="2">ಕ್ರ<br>ಸಂ</th><th rowspan="2">ಖಾತೆದಾರರ ಹೆಸರು</th><th rowspan="2">ಅನುಭವದಾರರ ಹೆಸರು</th><th rowspan="2">ಸರ್ವೆ<br>ನಂ.</th><th colspan="3">ಸ್ವಾಧೀನಪಡಿಸಿಕೊಳ್ಳುತ್ತಿರುವ ವಿಸ್ತೀರ್ಣ</th><th rowspan="2">ಆಕಾರ<br>(ರೂ)</th><th rowspan="2">ತರಹೆ</th><th colspan="4">ಚೆಕ್ಕುಬಂದಿ</th></tr>
<tr><th>ಒಟ್ಟು<br>ಎ–ಗು</th><th>ಖರಾಬು<br>ಎ–ಗು</th><th>ಐನ್<br>ಎ–ಗು</th><th>ಪೂರ್ವ<br>ಸ.ನಂ.</th><th>ಪಶ್ಚಿಮ<br>ಸ.ನಂ.</th><th>ಉತ್ತರ<br>ಸ.ನಂ.</th><th>ದಕ್ಷಿಣ<br>ಸ.ನಂ.</th></tr>
<tr><td>1</td><td>2</td><td>3</td><td>4</td><td>5</td><td>6</td><td>7</td><td>8</td><td>9</td><td>10</td><td>11</td><td>12</td><td>13</td></tr>
<tr><td>34.</td><td>ಆರ್.ಎಂ.ಬಸವರಾಜಪ್ಪ ಬಿನ್ ಮರುಳಸಿದ್ದಪ್ಪ ರೇವವ್ವ</td><td>ಆರ್.ಎಂ.ಬಸವರಾಜಪ್ಪ</td><td>32/5</td><td>1–05</td><td>–</td><td>1–05</td><td>0–65</td><td>ಖುಷ್ಕಿ</td><td colspan="4" rowspan="2"></td></tr>
<tr><td>35.</td><td>ಜಿ.ಬಿ.ಅಶೋಕಪ್ಪ ಬಿನ್ ಭೀಮಪ್ಪ</td><td>ಜಿ.ಬಿ.ಅಶೋಕಪ್ಪ</td><td>32/6P1</td><td>1–22</td><td>–</td><td>1–22</td><td>0–89</td><td>ಖುಷ್ಕಿ</td></tr>
<tr><td>36.</td><td>ಜಿ.ಬಿ.ನಾಗರಾಜ ಬಿನ್ ಭೀಮಪ್ಪ</td><td>ಜಿ.ಬಿ.ನಾಗರಾಜ</td><td>32/6P2</td><td>1–21</td><td>–</td><td>1–21</td><td>0–87</td><td>ಖುಷ್ಕಿ</td><td>34</td><td>15, 16, 17</td><td>13, 14</td><td>31</td></tr>
<tr><td>37.</td><td>ಶಿವಲಿಂಗಪ್ಪ ಬಿನ್ ಚನ್ನಬಸಪ್ಪ, ಸರ್ಕಾರ</td><td>ಶಿವಲಿಂಗಪ್ಪ, ಪಂಚಾಕ್ಷರಪ್ಪ, ಸರ್ಕಾರ</td><td>33/1</td><td>2–14</td><td>0–18</td><td>1–36</td><td>0–95</td><td>ಖುಷ್ಕಿ</td><td colspan="4" rowspan="3">ಪೂರ್ವಕ್ಕೆ :: ಸರ್ವೆ ನಂಃ 34<br>ಪಶ್ಚಿಮಕ್ಕೆ :: ಸರ್ವೆ ನಂಃ 13<br>ಉತ್ತರಕ್ಕೆ :: ಸರ್ವೆ ನಂಃ 46, 44<br>ದಕ್ಷಿಣಕ್ಕೆ :: ಸರ್ವೆ ನಂಃ 34</td></tr>
<tr><td>38.</td><td>ಯು.ಆರ್.ನಾಗೇಂದ್ರಪ್ಪ ಬಿನ್ ರೇವಣಸಿದ್ದಪ್ಪ</td><td>ಯು.ಆರ್.ನಾಗೇಂದ್ರಪ್ಪ</td><td>33/2</td><td>0–38</td><td>–</td><td>0–38</td><td>0–47</td><td>ಖುಷ್ಕಿ</td></tr>
<tr><td>39.</td><td>ರಾಜಪ್ಪ ಬಿನ್ ಸಿದ್ದಪ್ಪ<br>ಶೇಖರಪ್ಪ ಬಿನ್ ಸಿದ್ದಪ್ಪ</td><td>ರಾಜಪ್ಪ, ಶೇಖರಪ್ಪ</td><td>33/3</td><td>3–04</td><td>0–10</td><td>2–34</td><td>1–43</td><td>ಖುಷ್ಕಿ</td></tr>
<tr><td>40.</td><td>ಹನುಮಂತಪ್ಪ ಬಿನ್ ಗಿರಿಯಪ್ಪ</td><td>ಹನುಮಂತಪ್ಪ</td><td>34/1P1</td><td>2–30</td><td>–</td><td>2–30</td><td>2–75</td><td>ಖುಷ್ಕಿ</td><td colspan="4" rowspan="9">ಪೂರ್ವಕ್ಕೆ :: ಚಕ್ಕೂಲಿಕೆರೆ ಗಡಿ<br>ಪಶ್ಚಿಮಕ್ಕೆ :: ಸರ್ವೆ ನಂಃ 28, 31, 32, 33<br>ಉತ್ತರಕ್ಕೆ :: ಸರ್ವೆ ನಂಃ 35, 36, 37, 38, 39, 42, 44<br>ದಕ್ಷಿಣಕ್ಕೆ :: ರಸ್ತೆ</td></tr>
<tr><td>41.</td><td>ಶ್ರೀಮತಿ ಬಸಮ್ಮ ಕೋಂ ಲೇಟ್ ಮೈಲಾರಪ್ಪ</td><td>ಶ್ರೀಮತಿ ಬಸಮ್ಮ</td><td>34/1P2</td><td>2–10</td><td>–</td><td>2–10</td><td>2–25</td><td>ಖುಷ್ಕಿ</td></tr>
<tr><td>42.</td><td>ತೊಳಚಮ್ಮ ಕೋಂ ರಂಗಪ್ಪ</td><td>ತೊಳಚಮ್ಮ</td><td>34/2</td><td>2–00</td><td>–</td><td>2–00</td><td>2–00</td><td>ಖುಷ್ಕಿ</td></tr>
<tr><td>43.</td><td>ಶಬೀರ್‌ಬೇಗ್ ಬಿನ್ ಇಮಾಂಬೇಗ್</td><td>ಶಬೀರ್‌ಬೇಗ್</td><td>34/B3</td><td>3–00</td><td>–</td><td>3–00</td><td>7–86</td><td>ಖುಷ್ಕಿ</td></tr>
<tr><td>44.</td><td>ರಂಗಪ್ಪ ಬಿನ್ ಶಕುನಪ್ಪ</td><td>ರಂಗಪ್ಪ</td><td>34/B7</td><td>2–05</td><td>–</td><td>2–05</td><td>5–59</td><td>ಖುಷ್ಕಿ</td></tr>
<tr><td>45.</td><td>ಎಲ್.ಬಿ.ನಾಗರಾಜ್ ಬಿನ್ ಎಲ್.ಎನ್.ಬಸಪ್ಪ</td><td>ಎಲ್.ಬಿ.ನಾಗರಾಜ್</td><td>34/8<br>Block</td><td>1–20</td><td>–</td><td>1–20</td><td>4–02</td><td>ಖುಷ್ಕಿ</td></tr>
<tr><td>46.</td><td>ಜಿ.ಟಿ.ಚಂದ್ರಪ್ಪ ಬಿನ್ ತಿಮ್ಮಪ್ಪ</td><td>ಜಿ.ಟಿ.ಚಂದ್ರಪ್ಪ</td><td>34/B11</td><td>0–36</td><td>–</td><td>0–36</td><td>2–52</td><td>ಖುಷ್ಕಿ</td></tr>
<tr><td>47.</td><td>ಸೈಯದ್‌ಖಲೀಲ್‌ಸಾಬ್ ಬಿನ್ ಸೈಯದ್</td><td>ಸೈಯದ್‌ಖಲೀಲ್ ಸಾಬ್</td><td>34/B14</td><td>3–20</td><td>–</td><td>3–20</td><td>9–26</td><td>ಖುಷ್ಕಿ</td></tr>
<tr><td>48.</td><td>ಸೈಯದ್‌ಖಲೀಲ್‌ಸಾಬ್ ಬಿನ್ ಸೈಯದ್</td><td>ಸೈಯದ್‌ಖಲೀಲ್ ಸಾಬ್</td><td>34/B15</td><td>1–20</td><td>–</td><td>1–20</td><td>4–02</td><td>ಖುಷ್ಕಿ</td></tr>
</table>

| ಕ್ರ ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ಸ್ವಾಧೀನಪಡಿಸಿಕೊಳ್ಳುತ್ತಿರುವ ವಿಸ್ತೀರ್ಣ | | | ಆಕಾರ (ರೂ) | ತರಹೆ | ಚೆ ಕ್ಕು ಬ ಂ ದಿ | | | |
|---|---|---|---|---|---|---|---|---|---|---|---|---|
| | | | | ಒಟ್ಟು ಎ–ಗು | ಖರಾಬು ಎ–ಗು | ಐನ್ ಎ–ಗು | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. |
| **1** | **2** | **3** | **4** | **5** | 6 | **7** | **8** | **9** | **10** | **11** | **12** | **13** |
| 49. | ಮಹ್ಮದ್‌ಗೌಸ್ ಬಿನ್ ಮಹ್ಮದ್‌ಷರೀಫ್ | ಮಹ್ಮದ್‌ಗೌಸ್ | 34/17 BLO | 3–00 | – | 3–00 | 7–86 | ಖುಷ್ಕಿ | | | | |
| 50. | ಬಸಮ್ಮ ಕೋಂ ಹನುಮಂತಪ್ಪ | ಬಸಮ್ಮ | 34/19 | 2–28 | – | 2–28 | 7–20 | ಖುಷ್ಕಿ | | | | |
| 51. | ಕೈಕೋನ್‌ಭೀ ಕೋಂ ಖಾಜಿಬುಡೇನ್‌ಸಾಬ್ ಮಹಮ್ಮದ್ ಖಬೀರ್ ಬಿನ್ ಖಾಜಿ ಬುಡೇನ್ ಸಾಬ್ ಮಹಮದ್ ವಜೀರ್ ಬಿನ್ ಖಾಜಿ ಬುಡೇನ್‌ಸಾಬ್ | ಖಾಜಿಬುಡೇನ್‌ಸಾಬ್ ಕೈಕೋನ್‌ಭೀ ಮಹಮ್ಮದ್ ಖಬೀರ್ ಮಹಮದ್‌ವಜೀರ್ | 34/B20 | 4–00 | – | 4–00 | 10–48 | ಖುಷ್ಕಿ | ಪೂರ್ವಕ್ಕೆ :: ಚಕ್ಕೂಲಿಕೆರೆ ಗಡಿ<br>ಪಶ್ಚಿಮಕ್ಕೆ :: ಸರ್ವೆ ನಂಃ 28, 31, 32, 33<br>ಉತ್ತರಕ್ಕೆ :: ಸರ್ವೆ ನಂಃ 35, 36, 37, 38, 39, 42, 44<br>ದಕ್ಷಿಣಕ್ಕೆ :: ರಸ್ತೆ | | | |
| 52. | ರವಿಕುಮಾರ್ ಬಿನ್ ಟಿ.ಹಾಲಪ್ಪ, ಹೆಚ್.ಶ್ರೀನಿವಾಸ ಮೂರ್ತಿ ಬಿನ್ ಟಿ.ಹಾಲಪ್ಪ | ರವಿಕುಮಾರ್ ಹೆಚ್.ಶ್ರೀನಿವಾಸ ಮೂರ್ತಿ, ಟಿ.ಹಾಲಪ್ಪ | 34/B23 | 1–10 | – | 1–10 | 3–82 | ಖುಷ್ಕಿ | | | | |
| 53. | ಲಕ್ಕಮ್ಮ ಕೋಂ ಹನುಮಂತಪ್ಪ | ಲಕ್ಕಮ್ಮ | 34/B24 | 2–23 | – | 2–23 | 6–85 | ಖುಷ್ಕಿ | | | | |
| 54. | ಗೋಮಾಳ ಸಿ.ಕ್ಲಾಸ್ ಜಮೀನು | ಗೋಮಾಳ ಸಿ.ಕ್ಲಾಸ್ ಜಮೀನು | 34 | 70–00 | 7–00 | 63–00 | | ಖುಷ್ಕಿ | | | | |
| 55. | ಇಸ್ಮಾಯಿಲ್ ಬಿನ್ ಕಲೇಗಾರ್ ಮಹಮೂದ್ ಸಾಬ್ | ಇಸ್ಮಾಯಿಲ್ | 34/ Block-P1 | 4–00 | – | 4–00 | 10–48 | ಖುಷ್ಕಿ | | | | |
| 56. | ಕಲೇಗಾರ್ ಮಹ್‌ಬ್ಬೂ ಬಿನ್ ಖುದ್ದೂಸ್‌ಸಾಬ್ | ಕಲೇಗಾರ್‌ಮಹ್‌ಬ್ಬೂ | 34/ Block-P2 | 3–05 | – | 3–05 | 8–07 | ಖುಷ್ಕಿ | ಪೂರ್ವಕ್ಕೆ :: ಚಕ್ಕೂಲಿಕೆರೆ ಗಡಿ<br>ಪಶ್ಚಿಮಕ್ಕೆ :: ಸರ್ವೆ ನಂಃ 28, 31, 32, 33<br>ಉತ್ತರಕ್ಕೆ :: ಸರ್ವೆ ನಂಃ 35, 36, 37, 38, 39, 42, 44<br>ದಕ್ಷಿಣಕ್ಕೆ :: ರಸ್ತೆ | | | |
| 57. | ಶಿರಾಜ್ ಬಿನ್ ಮಹ್ಮದ್ ಷರೀಫ್ | ಶಿರಾಜ್ | 34/ Block-16 | 3–00 | – | 3–00 | 7–86 | ಖುಷ್ಕಿ | | | | |
| 58. | ಮಹದೇವಪ್ಪ ಬಿನ್ ಬಸಪ್ಪ | ಮಹದೇವಪ್ಪ | 34/ Block-9 | 0–22 | – | 0–22 | 1–54 | ಖುಷ್ಕಿ | | | | |
| | | | **ಒಟ್ಟು** | **228-09** | **10-32** | **217-17** | | | | | | |

**ಘೋಷ್ವಾರೆ**

| ಕ್ರ ಸಂ | ಗ್ರಾಮ | ಸ್ವಾಧೀನಪಡಿಸಿಕೊಳ್ಳಬೇಕಾದ ಜಮೀನಿನ ವಿಸ್ತೀರ್ಣ | | |
|---|---|---|---|---|
| | | ಒಟ್ಟು ವಿಸ್ತೀರ್ಣ ಎ–ಗು | ಖರಾಬು ಎ–ಗು | ಐನ್ ಎ–ಗು |
| 1 | ಚಿಕ್ಕೂಲಿಕೆರೆ | 209–05 | 39–30½ | 169–14½ |
| 2 | ಲಕ್ಷ್ಮೀಸಾಗರ | 279–02 | 0–08 | 278–34 |
| 3 | ಅಜ್ಜಿಹಳ್ಳಿ | 228–09 | 10–32 | 217–17 |
| | ಒಟ್ಟು | **716-16** | **50-30½** | **665-25½** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ವಿಶೇಷ ರಾಜ್ಯ ಪತ್ರಿಕೆ

| ಭಾಗ – III | ಬೆಂಗಳೂರು, ಶನಿವಾರ, ಜನವರಿ ೧೯, ೨೦೧೩ (ಪುಷ್ಯ ೨೯, ಶಕ ವರ್ಷ ೧೯೩೪) | ನಂ. ೬೪ |
|---|---|---|
| Part – III | Bangalore, Saturday, January 19, 2013 (Pushya 29, Shaka Varsha 1934) | No. 64 |

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ 108 ಸೇಸಕಿ 12, ಬೆಂಗಳೂರು ದಿನಾಂಕ: 19ನೇ ಜನವರಿ 2013**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ ದಿನಾಂಕ 1–1–1980 ರಿಂದ 31–12–2004ರವರೆಗೆ ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ 22–11–2010ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ದಿನಾಂಕ 29–03–2012 ಹಾಗೂ 09–07–2012ರ ಪತ್ರಗಳಲ್ಲಿ ಶ್ರೀ ಎಂ.ಎಸ್. ನಾಗರಾಜ, ಸಹಾಯಕ ಇಂಜಿನಿಯರ್, ಇವರು ದಿನಾಂಕ 02–05–86 ರಲ್ಲಿ ದಿನಗೂಲಿ ಮೇಲೆ ಸೇವೆಗೆ ಸೇರಿದ್ದು 10 ವರ್ಷಗಳ ಸೇವೆ ಪೂರೈಸಿದ ನಂತರ ಅವರ ಸೇವೆಯನ್ನು ಸಂಖ್ಯೆ:ನೀಇ:936:ಪಿಡಬ್ಲೂಸಿ:2000 ದಿನಾಂಕ 3–2–2001ರ ಆದೇಶದಲ್ಲಿ 2–5–1996 ರಿಂದ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಸಕ್ರಮಾತಿಗೊಳಿಸಿದ್ದು ದಿನಾಂಕ 3–2–2001 ರಿಂದ ಅನ್ವಯವಾಗುವಂತೆ ಸಹಾಯಕ ಇಂಜಿನಿಯರ್ ಹುದೆಯಲ್ಲಿ ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನ ನೀಡಿದ್ದು ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ 98 ಸೇಸಕಿ 08 ದಿನಾಂಕ 15–11–2010ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸದರಿಯವರ ಹೆಸರು ಸೇರ್ಪಡೆಗೊಂಡಿರುವುದಿಲ್ಲವಾದ ಕಾರಣ ಈಗ ಸದರಿಯವರ ಹೆಸರನ್ನು ದಿನಾಂಕ 15–11–2010ರ ಅಧಿಸೂಚನೆಯಲ್ಲಿ ಪ್ರಕಟಿಸಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸೇರ್ಪಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ)ರವರ ಶಿಫಾರಸ್ಸನ್ನು ಪರಿಶೀಲಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ ಪ್ರಚುರಪಡಿಸಿರುವ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಎಂ.ಎನ್.ನಾಗರಾಜ ಸಹಾಯಕ ಇಂಜಿನಿಯರ್ ಇವರ ಹೆಸರನ್ನು ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ 3859–A ರಲ್ಲಿ ಸೇರ್ಪಡೆ ಮಾಡಿ ಕೆಳಕಂಡಂತೆ ನಿಗದಿಪಡಿಸಲು ಉದ್ದೇಶಿಸಲಾಗಿದೆ.

| Ranking No | Provision AE. GRD No. | Name of the Engineer | SC/ ST | Date of Birth | Date of En try into service | Date of Regular Appointment to the cadre | ReMrks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3859-A | - | M.N.Nagaraja | - | 01-06-1960 | 02-05-1986 | 2-5-1996<br>3-02-2001<br>* | DWR |

* He shall be entitled to count his seniority from the notational date, only for the purpose of consideration for promotion to the post of Assistant Executive Engineer (Division-I).

ಸದರಿ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿವಸಗಳೊಳಗಾಗಿ ಭಾದಿತರಾಗಬಹುದಾದ ನೌಕರರು / ಅಧಿಕಾರಿಗಳು ಅವರ ಆಕ್ಷೇಪಣೆ / ಮನವಿಗಳಿದ್ದಲ್ಲಿ ಸಮರ್ಥನೀಯ ದಾಖಲೆಗಳೊಂದಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸ ಸೌಧ, 3ನೇ ಮಹಡಿ, ಬೆಂಗಳೂರು 560001 ಇವರಿಗೆ ಸಲ್ಲಿಸಬಹುದಾಗಿದೆ. ನಿಗದಿತ ಅವಧಿಯ ನಂತರ ಸ್ವೀಕೃತವಾದ ಆಕ್ಷೇಪಣೆ/ಸಲಹೆ/ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್.ಮೋಹನ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ)

# ವಿಶೇಷ ರಾಜ್ಯ ಪತ್ರಿಕೆ

| ಭಾಗ – III | ಬೆಂಗಳೂರು, ಶನಿವಾರ, ಜನವರಿ ೧೯, ೨೦೧೩ (ಪುಷ್ಯ ೨೯, ಶಕ ವರ್ಷ ೧೯೩೪) | ನಂ. ೬೫ |
|---|---|---|
| Part – III | Bangalore, Saturday, January 19, 2013 (Pushya 29, Shaka Varsha 1934) | No. 65 |


## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ 312 ಸೇಸಕಿ 12, ಬೆಂಗಳೂರು ದಿನಾಂಕ: 19ನೇ ಜನವರಿ 2013**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ ದಿನಾಂಕ 1–1–1980 ರಿಂದ 31–12–2004ರವರೆಗೆ ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ 22–11–2010ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ದಿನಾಂಕ 13–12–2012ರ ಪತ್ರದಲ್ಲಿ ಶ್ರೀ ಕೆ.ಪ್ರಭಾಕರ್ ಸಹಾಯಕ ಇಂಜಿನಿಯರ್, ಇವರು ದಿನಾಂಕ 26–5–1987 ರಲ್ಲಿ ದಿನಗೂಲಿ ಮೇಲೆ ಸೇವೆಗೆ ಸೇರಿದ್ದು 10 ವರ್ಷಗಳ ಸೇವೆ ಪೂರೈಸಿದ ನಂತರ ಅವರ ಸೇವೆಯನ್ನು ಸಂಖ್ಯೆ:ಲೋಇ:121:ಪಿಡಬ್ಲೂಸಿ:97 ದಿನಾಂಕ 22–11–97ರಲ್ಲಿ ದಿನಾಂಕ 26–5–97ರಿಂದ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಸಕ್ರಮಾತಿಗೊಳಿಸಿದ್ದು ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ 98 ಸೇಸಕಿ 08 ದಿನಾಂಕ: 15–11–2010ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸದರಿಯವರ ಹೆಸರು ಸೇರ್ಪಡೆಗೊಂಡಿರುವುದಿಲ್ಲವಾದ ಕಾರಣ ಈಗ ಸದರಿಯವರ ಹೆಸರನ್ನು ದಿನಾಂಕ 15–11–2010ರ ಅಧಿಸೂಚನೆಯಲ್ಲಿ ಪ್ರಕಟಿಸಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸೇರ್ಪಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ)ರವರ ಶಿಫಾರಸ್ಸನ್ನು ಪರಿಶೀಲಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ ಪ್ರಚುರಪಡಿಸಿರುವ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಕೆ.ಪ್ರಭಾಕರ್, ಸಹಾಯಕ ಇಂಜಿನಿಯರ್ ಇವರ ಹೆಸರನ್ನು ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ 3623–A ರಲ್ಲಿ ಸೇರ್ಪಡೆ ಮಾಡಿ ಕೆಳಕಂಡಂತೆ ನಿಗದಿಪಡಿಸಲು ಉದ್ದೇಶಿಸಲಾಗಿದೆ.

| Ranking No | Provision AE. GRD No. | Name of the Engineer | SC/ ST | Date of Birth | Date of En try into service | Date of Regular Appointment to the cadre | Remrks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3623-A | - | K.PRABHAKARA | - | 28 -09-1962 | 26-05-1987 | 26-05-1997 | DWR |

ಸದರಿ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿವಸಗಳೊಳಗಾಗಿ ಭಾದಿತರಾಗಬಹುದಾದ ನೌಕರರು/ಅಧಿಕಾರಿಗಳು ಅವರ ಆಕ್ಷೇಪಣೆ/ ಮನವಿಗಳಿದ್ದಲ್ಲಿ ಸಮರ್ಥನೀಯ ದಾಖಲೆಗಳೊಂದಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸ ಸೌಧ, 3ನೇ ಮಹಡಿ, ಬೆಂಗಳೂರು 560001 ಇವರಿಗೆ ಸಲ್ಲಿಸಬಹುದಾಗಿದೆ. ನಿಗದಿತ ಅವಧಿಯ ನಂತರ ಸ್ವೀಕೃತವಾದ ಆಕ್ಷೇಪಣೆ/ಸಲಹೆ/ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್.ಮೋಹನ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ)

ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಶನಿವಾರ, ಜನವರಿ ೧೯, ೨೦೧೩ (ಪುಷ್ಯ ೨೯, ಶಕ ವರ್ಷ ೧೯೩೪) | ನಂ.೬೬ |
|---|---|---|
| ***Part – IV-A*** | ***Bangalore, Saturday, January 19, 2013 (Pushya 29, Shaka Varsha 1934)*** | ***No. 66*** |


## *TRANSPORT SECRETARIAT*

### *NOTIFICATION*

### *No. SARIE 01 SAEPA 2011, Bangalore, Dated: 18-01-2013*

In exercise of the powers conferred by clause (xxxiii) of sub-section (2) of section 96 read with section 212 of the Motor Vehicles Act, 1988 (Central Act 59 of 1988), the draft rules to frame the Karnataka Motor Vehicles (Conditions for Vehicles engaged in transport of school children) Rules, 2012 was published as required by sub-section (1) of section 212 of the said Act, vide Notification No:SARIE 01 SAEPA 2011, dated:16.06.2012 in part-IV-A NO:403 of Karnataka Gazette Extraordinary dated:19.06.2012 inviting objections and suggestions from all the persons likely to be affected thereby, within 30 days from its publication in the official gazette and the said gazette was made available to the public on dated:19.06.2012.

And, Whereas, objections and suggestions received with in the time stipulated were examined.

Now, therefore, in exercise of the powers conferred by clause (xxxiii) of sub-section (2) of section 96 read with section 212 of the Motor Vehicles Act, 1988 (Central Act 59 of 1988), the Government of Karnataka hereby makes the following rules namely:

### *RULES*

***1. Title and commencement:-*** (1) These rules may be called Karnataka Motor Vehicles (Conditions for Vehicles engaged in transport of school children) Rules, 2012.

(2) They shall come into force from the date 01.05.2013.

***2. Definitions.-*** (1) In these rules unless the context otherwise requires,-

(a) "Act" means the Motor Vehicles Act, 1988 (Central Act 59 of 1988);

(b) "Attendant" means a person appointed for the purpose by the owner of the vehicle;

(c) "School Cab" means a contract carriage with seating capacity not exceeding 12+1 complying with the requirements with valid permit issued under section 74 of the Act;

(2) Words and expressions used but not defined herein, shall have the same meaning, as assigned to them in the Act.

***3. Necessity of permit.-*** No owner or operator of a motor vehicle shall permit the use of the vehicle as a transport vehicle for carrying of school children unless he carries a valid contract carriage permit issued under section 74 of the Act permitting the use of the vehicle for the said purpose.

***4. School cabs safety committee.-*** In every school wherein school cab is used as a means of transportation shall have a safety committee to look into the matters pertaining to safe transportation of School children, and transportation fee and identification of bus stops. The Safety Committee should comprise parents and transporters representitives along with the school staff. The committee shall verify the validity of documents of the vehicle viz., Registration Certificate, Certificate of fitness, Certificate of Insurance, Permit, Emission Certificate, Driving License, Fire extinguisher, First aid kit, and ensure that all the safety measures have been adopted in the vehicle.

***5. Parking and halting places.-*** The Regional Transport Authority shall in consultation with traffic police and municipal corporation or municipal council as the case may be shall specify the parking and halting places at appropriate locations exclusively for the school cabs having regard to the school timings and safety of the children.

***6. Conditions to be observed.-*** (1) The vehicle shall be fitted with speed governor which shall be maintained in good working condition at all times limiting the maximum speed to 40 kmph.

(2) The age of the vehicle shall not be more than Fifteen (15) years from the date of its initial registration as on the date of entry to transport school children.

(3) The body of school cab shall be highway yellow colour with a horizontal strip in green colour of 150 mm wide in the middle all round the vehicle and the words "School cab" shall be prominently displayed on all four sides of the vehicle in white paint. The height of the letter shall not be less than 100 mm.

(4) Where the age of the children being carried in the vehicle is less than twelve years, the number of children carried shall not exceed 1 ½ time the permitted seating capacity. In case of children of different ages, a person of above twelve years age shall be treated as one person.

(5) In case of Vehicle fitted with LPG kit, the authorized LPG kit to be installed and certified by the Registering Authroity.

(6) No seating arrangement over LPG tank.

(7) No tinted or coloured glass permitted. Only Plain white glass shall be fitted.

(8) Manufacturers seating capacity shall not be altered.

(9) Doors of the Cab shall be fitted with reliable locks.

(10) The driver of a school Cab must have valid License to drive LMV-Transport Vehicles for a period of atleast four years.

(11) The driver shall wear light blue shirt, light blue trouser and black shoes. His nameplate shall also be displayed on the Shirt.

(12) There shall be sufficient space provided to keep school bags inside the vehicle.

(13) No roof carriers allowed and no bags shall be hanged on the outer portion of the body.

(14) The name and address / telephone of the permit holder shall be painted or otherwise firmly affixed to the School cab on the rear exterior of the body in a colour vividly contrasting to the colour of the vehicle centered as high as practicable, below the window line in bold letters not less than 3 cms in size.

(15) Complete list of the children carrying in the school cab indicating the name, class, residential address, contact phone / mobile number, blood group and the points of stoppage for his/her embarkation and disembarkation near his/her residence against his/her name with route plan attested by the school authority shall be carried.

(16) In case of emergency, the school cab driver/ attendant shall inform the school authority about the incidence and make necessary arrangements for safety of school children.

(17) In case of kindergarden, if an authorized person recognized mutually by the school and parents, does not come to pick the child from the halting points and such child shall be taken back to the school and their parents should be called to fetch the child.

(18) The vehicle which is to be used as school cab shall be closed body type with hard top. No vehicle with canvas hood can be permitted to carry the children

By Order and in the name of the Governor of Karnataka,

***K.BEERESH***
Under Secretary to Government,
Transport Department


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| **ಭಾಗ – I** | **ಬೆಂಗಳೂರು, ಶನಿವಾರ, ಜನವರಿ ೧೯, ೨೦೧೩ (ಪುಷ್ಯ ೨೯, ಶಕ ವರ್ಷ ೧೯೩೪)** | **ನಂ. ೬೭** |
| ***Part – I*** | ***Bangalore, Saturday, January 19, 2013 (Pushya 29, Shaka Varsha 1934)*** | ***No. 67*** |


## ಕರ್ನಾಟಕ ಸರ್ಕಾರದ ನಡವಳಿಗಳು

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:–** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ನೇತ್ರ ಸಹಾಯಕ ವೃಂದದ ಹುದ್ದೆಗಳನ್ನು ಪುನರ್ ಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ:–**

1. ಸರ್ಕಾರಿ ಆದೇಶ ಸಂಖ್ಯೆ: 97 ಸಿಜಿಇ 2001, ದಿನಾಂಕ: 22.06.2001.
2. ಸರ್ಕಾರಿ ಆದೇಶ ಸಂಖ್ಯೆ: 97 ಸಿಜಿಇ 2001, ದಿನಾಂಕ:.05.09.2001.
3. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ರವರ ಪತ್ರ ಸಂ. ಟಿಇಟಿ/35/11–12, ದಿನಾಂಕ: 13.11.2012.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ನೇತ್ರ ಸಹಾಯಕರು: ರೆಫ್ರಾಕ್ಷನಿಸ್ಟ್, ಆಪ್ಟೀಷಿಯನ್, ಅರ್ಥೋಆಪ್ಟಿಸ್ಟ್ ಹುದ್ದೆಗಳ ಒಟ್ಟು ವೃಂದ ಬಲದಲ್ಲಿ ಕೆಲವೊಂದು ಹುದ್ದೆಗಳನ್ನು ಉನ್ನತೀಕರಿಸಿ 'ಹಿರಿಯ ನೇತ್ರ ಸಹಾಯಕ' ಮತ್ತು 'ಮುಖ್ಯ ನೇತ್ರ ಸಹಾಯಕರು' ಎಂದು ಉಳಿದ ಹುದ್ದೆಗಳನ್ನು ನೇತ್ರ ಸಹಾಯಕ ಎಂದು ಪದನಾಮೀಕರಿಸಿದೆ.

ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಹೊಸದಾಗಿ ಸೃಜಿಸಲಾದ ಮುಖ್ಯ ನೇತ್ರ ಸಹಾಯಕರು ಮತ್ತು ಹಿರಿಯ ನೇತ್ರ ಸಹಾಯಕರ ಹುದ್ದೆಗೆ ನೇಮಕಾತಿ ವಿಧಾನಗಳನ್ನು ನಿಗಧಿಪಡಿಸಿ ಕರ್ನಾಟಕ, ಆರೋಗ್ಯ ಮತ್ತು ಕುಟುಂಬ

ಕಲ್ಯಾಣ ಸೇವೆಗಳು (ನೇಮಕಾತಿ) ನಿಯಮಗಳು 1965ಕ್ಕೆ ತಿದ್ದುಪಡಿ ಮಾಡುವುದನ್ನು ಬಾಕಿ ಇಟ್ಟು ಮುಖ್ಯ ನೇತ್ರ ಸಹಾಯಕರ ಮತ್ತು ಹಿರಿಯ ನೇತ್ರ ಸಹಾಯಕರ ವೃಂದಗಳನ್ನು ಸೇರ್ಪಡೆ ಮಾಡಿ ಆದೇಶ ಹೊರಡಿಸಲಾಗಿತ್ತು.

ಮೇಲೆ ಕ್ರಮಾಂಕ (3) ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು, ಇವರು ಇಲಾಖೆಯಲ್ಲಿನ ಗ್ರೂಪ್ 'ಸಿ' ವೃಂದದ 'ನೇತ್ರ ಸಹಾಯಕರು', 'ಹಿರಿಯ ನೇತ್ರ ಸಹಾಯಕರು' ಮತ್ತು 'ಮುಖ್ಯ ನೇತ್ರ ಸಹಾಯಕರ' ಹುದ್ದೆಗಳನ್ನು ಇತರ ರಾಜ್ಯಗಳಲ್ಲಿ ಪದನಾಮೀಕರಿಸಿರುವಂತೆ ಕ್ರಮವಾಗಿ 'ನೇತ್ರಾಧಿಕಾರಿ' 'ಹಿರಿಯ ನೇತ್ರಾಧಿಕಾರಿ' ಮತ್ತು 'ಮುಖ್ಯ ನೇತ್ರಾಧಿಕಾರಿ' ಎಂದು ಪುನರ್ ಪದನಾಮೀಕರಿಸುವಂತೆ ಕೋರಿದ್ದಾರೆ. ಮುಂದುವರೆದು ಈ ಪದನಾಮ ಬದಲಾಯಿಸುವುದರಿಂದ ಈ ವೃಂದದ ವೇತನ ಶ್ರೇಣಿಯಲ್ಲಿ ಯಾವುದೇ ಬದಲಾವಣೆ ಉಂಟಾಗುವುದಿಲ್ಲವೆಂದು ತಿಳಿಸಿದ್ದಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಆಕುಕ 357 ಸಿಜಿಇ 2012, ಬೆಂಗಳೂರು, ದಿನಾಂಕ: 27.12.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿರುವ ನೇತ್ರ ಸಹಾಯಕರು, ಹಿರಿಯ ನೇತ್ರ ಸಹಾಯಕರು ಮತ್ತು ಮುಖ್ಯ ನೇತ್ರ ಸಹಾಯಕರು ಹುದ್ದೆಗಳನ್ನು ಈ ಕೆಳಕಂಡಂತೆ ಮರು ಪದನಾಮೀಕರಿಸಿದೆ.

1. ನೇತ್ರ ಸಹಾಯಕರು (ವೇತನ ಶ್ರೇಣಿ ರೂ. 14,550–26,700) ಹುದ್ದೆಗಳನ್ನು 'ನೇತ್ರಾಧಿಕಾರಿ' ಎಂದು ಪುನರ್ ಪದನಾಮೀಕರಿಸಿದೆ.
2. ಹಿರಿಯ ನೇತ್ರ ಸಹಾಯಕರು (ವೇತನ ಶ್ರೇಣಿ ರೂ. 16,000–29,600) ಹುದ್ದೆಗಳನ್ನು 'ಹಿರಿಯ ನೇತ್ರಾಧಿಕಾರಿ' ಎಂದು ಪುನರ್ ಪದನಾಮೀಕರಿಸಿದೆ.
3. ಮುಖ್ಯ ನೇತ್ರಾ ಸಹಾಯಕರು (ವೇತನ ಶ್ರೇಣಿ ರೂ. 20,000–36,300) ಹುದ್ದೆಗಳನ್ನು 'ಮುಖ್ಯ ನೇತ್ರಾಧಿಕಾರಿ' ಎಂದು ಪುನರ್ ಪದನಾಮೀಕರಿಸಿದೆ.

**ಷರತ್ತುಗಳು:**

1. ಈ ರೀತಿ ಪದನಾಮೀಕರಿಸುವುದರಿಂದ ಯಾವುದೇ ವೇತನ ಶ್ರೇಣಿ/ವೇತನ ಹೆಚ್ಚಳಕ್ಕಾಗಲಿ/ಮುಂಬಡ್ತಿಗಾಗಲಿ ಬೇಡಿಕೆಯನ್ನು ಸಲ್ಲಿಸತಕ್ಕದಲ್ಲ.
2. ಪುನರ್ ಪದನಾಮೀಕರಣ ಮಾಡಿದ ಅನ್ವಯ ವೃಂದ & ನಿಯಮಗಳಲ್ಲಿ ಸೂಕ್ತ ತಿದ್ದುಪಡಿ ಮಾಡುವುದು.
3. ಈ ಹುದ್ದೆಗಳಿಗೆ ನಿಗಧಿಪಡಿಸಿದ ಕರ್ತವ್ಯ ಮತ್ತು ಜವಾಬ್ದಾರಿಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.
4. ಹಾಲಿ ಇರುವ ಸ್ಥಳಗಳಲ್ಲೇ ಈ ಹುದ್ದೆಗಳು ಅಸ್ತಿತ್ವದಲ್ಲಿರುತ್ತವೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 1193 ವೆಚ್ಚ–5/2012, ದಿನಾಂಕ: 22.12.2012 ರಲ್ಲಿ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಆರೋಗ್ಯ 1 ಮತ್ತು 2)


# ವಿಶೇಷ ರಾಜ್ಯ ಪತ್ರಿಕೆ

| ಭಾಗ – V | ಬೆಂಗಳೂರು, ಮಂಗಳವಾರ, ಜನವರಿ ೨೨, ೨೦೧೩ (ಮಾಘ ೨, ಶಕ ವರ್ಷ ೧೯೩೪) | ನಂ.೬೮ |
|---|---|---|
| *Part – V* | *Bangalore, Tuesday, January 22, 2013 (Magha 2, Shaka Varsha 1934)* | *No. 68* |


***OFFICE OF KARNATAKA STATE LEGAL SERVICES AUTHORITY***

***"Nyaya Degula", 1st Floor, H.Siddaiah Road, BANGALORE – 560 027.***

***NOTIFICATION***

***No. K.S.L.S.A. 1 / 2013, Bangalore, dated : 11 / 01 / 2013***

***RECRUITMENT OF CANDIDATES TO THE POST OF DRIVER OF BUS***

***LAST DATE FOR RECEIPT OF APPLICATION 11 / 02 / 2013***

Applications in the prescribed proforma appended to the Notification are invited from the candidates who are qualified as on the last date fixed for receipt of applications for selection to the posts of ***DRIVER of Bus (Ashok Leyland Buses) in KARNATAKA STATE LEGAL SERVICES AUTHORITY.***

The details of vacancies are classified as under:

***NUMBER OF VACANCIES:***

| Name of the Post | No.of Vacan-cies | Classification | | | | | | | |
|---|---|---|---|---|---|---|---|---|---|
| | | Category | SC (woman) | Cat-I (others) | II(A) (others) | II(B) (others) | GM (others) | GM (woman) | GM (Rural) |
| Driver of Bus | 9 | | 1 | 1 | 1 | 1 | 2 | 1 | 2 |
| | | **Total** | **1** | **1** | **1** | **1** | **2** | **1** | **2** |

***Note:***

**1.** The above classification is made keeping in view the following:-

Government Order No. DPAR 08 SRS 1995 dated 20-6-1995 as issued from time to time.

**2.** ***Method of Recruitment:-*** Selection of candidates will be made in accordance with the rule 9 & 10 of the Karnataka State Legal Services Authorities Rules, 1996, as amended from time to time.

**3.** ***Minimum Qualification:-***

***For the Post of Driver of Bus:-***

Must have passed SSLC Examination and must be a holder of Current Heavy Motor Vehicle Driving License.

**4.** ***Scale of Pay:***

Rs.11600-200-12000-250-13000-300-14200-350-15600-400-17200-450-19000-500-21000

**5.** ***Probation:-*** The applicant, if appointed, shall be initially on probation for a period of two years or for extended period of probation.

**6.** ***Age Limit:-*** The applicants must have completed the age of 18 years as on the last date for submission of application and must not have completed the age of :

(a) ***40 years*** in the case of a person belonging to the ***Scheduled Caste & Cat-I.***

(b) ***38 years*** in case of candidates belonging to ***IIA*** & ***IIB***

***(c)*** ***35 years*** in case of candidates belonging to ***GM category.***

**7.** The candidates should attend test and / interview as his expenses. The marks obtained in the qualifying examination test and / interview will be considered for selection.

**8.** If the applicant is in Government service, he has to submit the application through proper channel along with Service Certificate and "No Objection Certificate" issued by the Appointing Authority concerned.

**9.** Those who attempt to obtain extraneous support by any means for his candidate from officials or non-officials shall not be eligible for appointment.

**10.** The applicants applying for more than one post shall submit separate application for each post.

**11.** If candidates under the category of SC(W) & GM(W) are not available for selection as driver of bus, applicants for the post of driver under the category of SC(Others) & GM(Others) will be considered.

**12.** ***Application Form:-*** Application in the prescribed proforma appended with the notification shall be filled in by the candidate in his handwriting and shall accompany self attested copies of the following certificates.

(a) Marks Card of SSLC Examination & Current Heavy Motor Vehicle Driving License.

(b) In addition to the above, the candidates should produce self attested copies of the following records:- SSLC/VII Standard Transfer Certificate / and other equivalent examination certificate showing the date of birth.

(c) Three Certificates of character, one from the Principal / Head of the Institution/ School in which the candidate last studied and two from respectable persons not related to the candidate, testifying character.

(d) Relevant Caste/Category certificate in the prescribed form issued by the competent authority in case of candidate claiming reservation.

(e) Any authentic documents of proof of address.

***13. Note:-***

(a) Incomplete applications will be rejected without notice.

(b) Original certificates and testimonials shall be submitted only at the time of test / interview. Candidates shall not forward the original documents along with the application.

(c) Those candidates who are willing to get the letter of intimation for the test/ interview by RPAD shall enclose self addressed cover affixing stamp of Rs. 30/- and those willing to get the letter of intimation by ordinary post shall enclose self addressed cover affixing stamp of Rs.5/-.

(d) Last date for submission of application in the prescribed form complete in all respects, along with the necessary testimonials, either through post or in person is before ***4.00 p.m. on 11-02-2013.***

(e) Applications not completely filled/ unsigned/ received after due date are liable to be rejected summarily.

(f) Candidate should submit only one application under one category.

(g) One recent passport size photograph of the candidate should be affixed on the application with signature across the same.

(h) Those candidates called for test or /interview will have to appear before the Appointing Authority at the place to be indicated in the communication of Karnataka State Legal Services Authority & at their own cost. The candidates appearing for test or / interview are NOT ENTITLED FOR T.A. / D.A.

(i) If the last date fixed for the receipt of applications happens to be a General Holiday, the next working day shall be the last date for receipt of applications.

***14. Last date for receipt of application:-***

Applications complete in all respects shall reach the Member Secretary, Karnataka State Legal Services Authority, "Nyaya Degula", 1st Floor, H.Siddaiah Road, Bangalore – 560 027 ***on or before 4.00 p.m. on 11 / 02 / 2013.***

Applications sent through post shall be superscribed as ***"Application for recruitment to the post of DRIVER OF BUS in KARNATAKA STATE LEGAL SERVICES AUTHORITY."***

By Order

***VISHWANATH V. ANGADI***
***District & Sessions Judge,***
Member Secretary. KSLSA, Bangalore.

## *FORM OF APPLICATION FOR RECRUITMENT TO THE POST DRIVER OF BUS IN KARNATAKA STATE LEGAL SERVICES AUTHORITY*

To,
The Member Secretary,
Karnataka State Legal Services Authority,
"Nyaya Degula", 1st Floor,
H.Siddaiah Road,
Bangalore – 560 027.

Space for affixing recent Passport size photo

| | | | |
|---|---|---|---|
| 1. | Name of the applicant in full<br>(in Block letters) | : | |
| 2. | Name of father / husband | : | |
| 3. | Qualification/s | : | |
| 4. | Sex | : | |
| 5. | Age and Date of Birth (as mentioned in the SSLC/TC or equivalent certificate) | : | |
| 6. | Postal Address (in block letters)<br>(a) Permanent postal address<br>(b) Present postal address<br>(c) Mobile Number | : | |

| | | | |
|---|---|---|---|
| 7. | Whether the applicant is presently employed? If so, furnish the details of employment and monthly income. | : | |
| 8. | Occupation of parents/Guardian and Department in which they are working. | : | |
| 9. | Annual Income of Parents/Guardian. | : | |
| 10. | Whether the applicant belongs to Scheduled Caste / Rural Quota/ Cat-I, Cat-IIA & Cat-IIB. If so, the same should be indicated. A copy of the certificate in support of the claim should be attached. | : | |
| 11. | Whether the applicant is / was a party to any criminal proceedings. If yes, furnish detailed information of C.C.No. etc., | : | |
| 12. | State whether you have been prosecuted for any offence. If so, furnish the details | : | |
| 13. | If the applicant is married whether he/she has more than one wife/husband living. | : | |
| 14. | Experience, if any<br>(Enclose copy of certificate) | : | |

I do hereby solemnly and sincerely affirm that the statements made and the information furnished above are true. Should it however be found that any information furnished herein is untrue in material particulars, I realize that I am liable to criminal prosecution and I am also agreeable to forego the claim for public services under the State Government.

***Place:***

***Date:*** ***SIGNATURE OF THE CANDIDATE***


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – *IV-A* | ಬೆಂಗಳೂರು, ಬುಧವಾರ, ಜನವರಿ ೨೩, ೨೦೧೩ (ಮಾಘ ೩, ಶಕ ವರ್ಷ ೧೯೩೪) | ನಂ.೬೯ |
| ***Part – IV-A*** | ***Bangalore, Wednesday, January 23, 2013 (Magha 3, Shaka Varsha 1934)*** | ***No. 69*** |


## *PARLIAMENTARY AFFAIRS AND LEGISLATION SECRETARIAT*

### *NOTIFICATION*

***No. DPAL 01 SAMVYAVI 2013, Bangalore, Dated : 23.01.2013***

The following Order made by the Governor is hereby published for general information:-

***"ORDER - I***

In exercise of the powers conferred upon me by clause (1) of Article 174 of the Constitution of India, I, H.R.Bhardwaj, Governor of Karnataka, do hereby summon the Karnataka Legislative Council to meet at Bangalore at 11.00 A.M. on Monday the $4^{th}$ day of February, 2013.

***H.R. BHARDWAJ***
***GOVERNOR OF KARNATAKA"***

By order and in the name of the Governor of Karnataka,

***G.K. BOREGOWDA***
Secretary to Government
Department of Parliamentary Affairs and Legislation

## PARLIAMENTARY AFFAIRS AND LEGISLATION SECRETARIAT

### NOTIFICATION

**No. DPAL 01 SAMVYAVI 2013, Bangalore, Dated : 23.01.2013**

The following Order made by the Governor is hereby published for general information:-

***"ORDER - II***

In exercise of the powers conferred upon me by clause (1) of Article 174 of the Constitution of India, I, H.R.Bhardwaj, Governor of Karnataka, do hereby summon the Karnataka Legislative Assembly to meet at Bangalore at 11.00 A.M. on Monday the 4th day of February, 2013.

***H.R. BHARDWAJ***
***GOVERNOR OF KARNATAKA"***

By order and in the name of the Governor of Karnataka,

***G.K. BOREGOWDA***
Secretary to Government
Department of Parliamentary Affairs and Legislation


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – III | ಬೆಂಗಳೂರು, ಬುಧವಾರ, ಜನವರಿ ೨೩, ೨೦೧೩ (ಮಾಘ ೩, ಶಕ ವರ್ಷ ೧೯೩೪) | ನಂ.೭೦ |
| *Part – III* | *Bangalore, Wednesday, January 23, 2013 (Magha 3, Shaka Varsha 1934)* | *No. 70* |


## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ 314 ಸೇಸಕಿ 12, ಬೆಂಗಳೂರು ದಿನಾಂಕ: 22ನೇ ಜನವರಿ 2013**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಟತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ ದಿನಾಂಕ 1–1–1980 ರಿಂದ 31–12–2004 ರವರೆಗೆ ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ 22–11–2010ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ದಿನಾಂಕ 3–12–2012ರ ಪತ್ರದಲ್ಲಿ ಶ್ರೀ ಕೆ.ಎಂ.ವಿನೋದ, ಸಹಾಯಕ ಇಂಜಿನಿಯರ್, ಇವರು ದಿನಾಂಕ 1–4–91 ರಲ್ಲಿ ದಿನಗೂಲಿ ಆಧಾರದ ಮೇಲೆ ಕಿರಿಯ ಇಂಜಿನಿಯರ್ ಹುದ್ದೆಯ ಕರ್ತವ್ಯಕ್ಕೆ ಸೇರಿದ್ದು ದಿನಾಂಕ 1–4–2001ರಿಂದ ಅನ್ವಯವಾಗುವಂತೆ ಸೇವಾ ಸಕ್ರಮಾತಿಗೊಂಡು ದಿನಾಂಕ 2–11–2001ರ ಸರ್ಕಾರದ ಆದೇಶ ಸಂಖ್ಯೆ:ಜಸಂಇ:199:ಸೇಸಕಿ:2001ರಲ್ಲಿ ಕಿರಿಯ ಇಂಜಿನಿಯರ್ ವೃಂದದಿಂದ ಸಹಾಯಕ ಇಂಜಿನಿಯರ್ ವೃಂದಕ್ಕೆ ವೃಂದ ಬದಲಾವಣೆ ಹೊಂದಿ ದಿನಾಂಕ 31–12–2001ರಿಂದ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಸಹಾಯಕ ಇಂಜಿನಿಯರ್ ವೃಂದದ ಜೇಷ್ಟತಾಪಟ್ಟಿಯಲ್ಲಿ ಇವರ ಹೆಸರು ಸೇರ್ಪಡೆಗೊಂಡಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಮುಂದುವರೆದು ಲೋಕೋಪಯೋಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮದ ಅನುಸಾರ ಬಿ.ಇ.ಪದವಿ ಪಡೆದ ಕಿರಿಯ ಇಂಜಿನಿಯರ್‌ಗಳು ಸಹಾಯಕ ಇಂಜಿನಿಯರ್ ವೃಂದಕ್ಕೆ ವೃಂದ ಬದಲಾವಣೆ ಹೊಂದಿದಲ್ಲಿ ನಿಯಮಗಳಂತೆ ಅವರುಗಳು ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ಸಲ್ಲಿಸಿದ 1/3 ಭಾಗದಷ್ಟು ಸೇವೆಯನ್ನು ಸಹಾಯಕ ಇಂಜಿನಿಯರ್ ವೃಂದದ ಜೇಷ್ಟತೆಯಲ್ಲಿ ಪರಿಗಣಿಸಲು ಅವಕಾಶ ಕಲ್ಪಿಸಿರುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ 98 ಸೇಸಕಿ 08 ದಿನಾಂಕ 15–11–2010ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸದರಿಯವರ ಜೇಷ್ಠತೆಯನ್ನು ದಿನಾಂಕ 1–10–2001 ರಿಂದ ಪರಿಗಣಿಸಿ ಸೇರ್ಪಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಲೋಕೋಪಯೋಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಾವಳಿಯಲ್ಲಿ ಕಲ್ಪಿಸಿರುವ ಅವಕಾಶದಂತೆ, ಪದವಿ ಹೊಂದಿದ ಕಿರಿಯ ಇಂಜಿನಿಯರ್‌ಗಳು ಸಹಾಯಕ ಇಂಜಿನಿಯರ್ ಹುದ್ದೆಗೆ ವೃಂದ ಬದಲಾವಣೆಯ ಮುಖಾಂತರ ವರ್ಗಾವಣೆಯಾಗಿ ನೇಮಕಗೊಂಡ ತರುವಾಯ ಅವರುಗಳಿಗೆ ಸಹಾಯಕ ಇಂಜಿನಿಯರ್ ಹುದ್ದೆಯಿಂದ ಮುಂದಿನ ಹುದ್ದೆಯಾದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹುದ್ದೆಗೆ ಪದೋನ್ನತಿಗೆ ಪರಿಗಣಿಸುವ ಸಂದರ್ಭದಲ್ಲಿ ಅವರುಗಳು ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ಸಲ್ಲಿಸಿದ ಸೇವೆಯಲ್ಲಿ 1/3ನೇ ಭಾಗ ಗರಿಷ್ಟ 4 ವರ್ಷಗಳ ಸೇವೆಯನ್ನು ಸಹಾಯಕ ಇಂಜಿನಿಯರ್ ವೃಂದಕ್ಕೆ ಪರಿಗಣಿಸಿ ಸಹಾಯಕ ಇಂಜಿನಿಯರ್ ಹುದ್ದೆಯ ಜೇಷ್ಟತೆಯಲ್ಲಿ ಕಾಲ್ಪನಿಕವಾಗಿ ನಿಗದಿಪಡಿಸಲು ಅವಕಾಶ ಕಲ್ಪಿಸಲಾಗಿದೆ. ಆದ್ದರಿಂದ ಶ್ರೀ ಕೆ.ಎಂ.ವಿನೋದ, ಸಹಾಯಕ ಇಂಜಿನಿಯರ್ ಇವರು ಈ ಹಿಂದೆ ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ದಿನಾಂಕ 1–4–2001 ರಿಂದ

31–12–2001ರವರೆಗೆ ಸಲ್ಲಿಸಿದ ಸೇವೆಯಲ್ಲಿ 1/3 ಭಾಗದ ಸೇವೆಯನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವಿಭಾಗ–1 ವೃಂದಕ್ಕೆ ಪದೋನ್ನತಿಗೆ ಪರಿಗಣಿಸುವ ಸಲುವಾಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮದಲ್ಲಿ ಕಲ್ಪಿಸಿರುವ ಅವಕಾಶದಂತೆ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ದಿನಾಂಕ 1–10–2001ಕ್ಕೆ ಕಾಲ್ಪನಿಕವಾಗಿ ಪರಿಗಣಿಸಿ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ 15–11–2010ರ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ 3882–A ರಲ್ಲಿ ಈ ಕೆಳಕಂಡಂತೆ ನಿಗದಿಪಡಿಸಿ ಸೇರ್ಪಡೆ ಮಾಡಬಹುದಾಗಿರುತ್ತದೆ.

| ***Ranking No*** | ***Provision AE. GRD No.*** | ***Name of the Engineer*** | ***SC/ ST*** | ***Date of Birth*** | ***Date of Entry into service*** | ***Date of Regular Appointment to the cadre*** | ***Re Marks*** |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3882-A | - | K.M.Vinoda | - | 28-11-69 | 1-4-1991 | 31-12-2001<br>1-10-2001<br>* | DWR |

* He shall be entitled to count his seniority from the notational date, only for the purpose of consideration for promotion to the post of Assistant Executive Engineer (Division-I).

ಸದರಿ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿವಸಗಳೊಳಗಾಗಿ ಭಾದಿತರಾಗಬಹುದಾದ ನೌಕರರು/ಅಧಿಕಾರಿಗಳು ಅವರ ಆಕ್ಷೇಪಣೆ/ ಮನವಿಗಳಿದ್ದಲ್ಲಿ ಸಮರ್ಥನೀಯ ದಾಖಲೆಗಳೊಂದಿಗೆ ಸರ್ಕಾರದ ಕಾರ್ಯದರ್ಶಿಗಳು ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸ ಸೌಧ, 3ನೇ ಮಹಡಿ, ಬೆಂಗಳೂರು 560001 ಇವರಿಗೆ ಸಲ್ಲಿಸಬಹುದಾಗಿದೆ. ನಿಗದಿತ ಅವಧಿಯ ನಂತರ ಸ್ವೀಕೃತವಾದ ಆಕ್ಷೇಪಣೆ/ ಸಲಹೆ/ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್.ಮೋಹನ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ)


# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಜನವರಿ ೨೫, ೨೦೧೩ (ಮಾಘ ೫, ಶಕ ವರ್ಷ ೧೯೩೪) | ನಂ. ೭೨ |
|---|---|---|
| ***Part – IV-A*** | ***Bangalore, Friday, January 25, 2013 (Magha 5, Shaka Varsha 1934)*** | ***No. 72*** |


## *CABINET AFFAIRS AND PERSONNEL AND ADMINISTRATIVE REFORMS SECRETARIAT*

### *NOTIFICATION*

### *No. GS 48 GSE 2012, Bangalore, Dated: 25th January 2013*

Shri Jagadish Shettar, Chief Minister of Karnataka vide his two separate letters dated 25.01.2013, has forwarded the resignation of Shri C.M. Udasi, Minister for Public Works and Kum. Shobha Karandlaje, Minister for Energy from his Council of Ministers and requested to accept the same with immediate effect.

In exercise of the powers vested in me under Article 164(1) of the Constitution of India, I. ***H.R. BHARDWAJ, Governor of Karnataka,*** am pleased to accept the resignation of Shri C.M. Udasi, Minister for Public Works and Kum. Shobha Karandlaje, Minister for Energy from the Council of Ministers with immediate effect.

***H.R. BHARDWAJ***
***GOVERNOR OF KARNATAKA***

By order and in the name of the Governor of Karnataka,

No. DCA 88 GAM 2012
Dated : 25th January, 2013

***B.V. KULKARNI***
Additional Secretary to Government
D.C.A. & D.P.A.R. (State Protocol)

# ವಿಶೇಷ ರಾಜ್ಯ ಪತ್ರಿಕೆ



| | | |
|---|---|---|
| ಭಾಗ - ***III*** | **ಬೆಂಗಳೂರು, ಸೋಮವಾರ, ಜನವರಿ ೨೮, ೨೦೧೩ (ಮಾಘ ೮, ಶಕ ವರ್ಷ ೧೯೩೪)** | **ನಂ. ೭೩** |
| ***Part - III*** | ***Bangalore, Monday, January 28, 2013 (Magha 08, Shaka Varsha 1934)*** | ***No. 73*** |



## ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರಪತ್ರ–2**

[12(2) ನೇ ನಿಯಮವನ್ನು ನೋಡಿ]

**ಅಧಿಸೂಚನೆ**

**ಸಂಖ್ಯೆ ರಾಚು ಸಿಆರ್.15/2011–12, ದಿನಾಂಕ : 28ನೇ ಜನವರಿ 2013**

1993 ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ದಾವಣಗೆರೆ ಜಿಲ್ಲೆಯ **ಹರಪನಹಳ್ಳಿ ತಾಲ್ಲೂಕಿನ 35. ಹಾರಕನಾಳು ಗ್ರಾಮ ಪಂಚಾಯತಿಯ** ಚುನಾವಣಾ ಕ್ಷೇತ್ರಗಳಿಂದ ಸದರಿ ಗ್ರಾಮ ಪಂಚಾಯತಿಗೆ ಸದಸ್ಯರ ಸ್ಥಾನಗಳನ್ನು ತುಂಬಲು ಚುನಾವಣೆ ನಡೆಸಬೇಕಾಗಿದೆ.

ಆದುದರಿಂದ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993ರ 12ನೇ ನಿಯಮಕ್ಕನುಸಾರವಾಗಿ **ದಾವಣಗೆರೆ ಜಿಲ್ಲೆಯ ಜಿಲ್ಲಾಧಿಕಾರಿಯಾದ ಎಸ್.ಎಸ್. ಪಟ್ಟಣಶೆಟ್ಟಿ** ಎಂಬ ಹೆಸರಿನ ನಾನು ಸದರಿ ಚುನಾವಣೆಗೆ ಸಂಬಂಧಿಸಿದ ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸುತ್ತೇನೆ.

| | | |
|---|---|---|
| (ಎ) | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | **04–02–2013 (ಸೋಮವಾರ)** |
| (ಬಿ) | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | **05–02–2013 (ಮಂಗಳವಾರ)** |
| (ಸಿ) | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | **07–02–2013 (ಗುರುವಾರ)** |
| (ಡಿ) | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ, ದಿನ ಮತ್ತು ಸಮಯ | **17–02–2013 (ಭಾನುವಾರ) ಬೆಳಿಗ್ಗೆ 7.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ** |
| (ಇ) | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | **22–02–2013 (ಶುಕ್ರವಾರ)** |

**ಎಸ್.ಎಸ್. ಪಟ್ಟಣಶೆಟ್ಟಿ**
ಜಿಲ್ಲಾಧಿಕಾರಿಗಳು,
ದಾವಣಗೆರೆ ಜಿಲ್ಲೆ.

# ವಿಶೇಷ ರಾಜ್ಯ ಪತ್ರಿಕೆ



| | | |
|---|---|---|
| ಭಾಗ - ***III*** | **ಬೆಂಗಳೂರು, ಸೋಮವಾರ, ಜನವರಿ ೨೮, ೨೦೧೩ (ಮಾಘ ೮, ಶಕ ವರ್ಷ ೧೯೩೪)** | **ನಂ. ೭೫** |
| ***Part - III*** | ***Bangalore, Monday, January 28, 2013 (Magha 08, Shaka Varsha 1934)*** | ***No. 75*** |



## ಜಿಲ್ಲಾಧಿಕಾರಿಯವರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

**ಪ್ರಪತ್ರ–2**

[12(2) ನೇ ನಿಯಮವನ್ನು ನೋಡಿ]

(ಗ್ರಾಮ ಪಂಚಾಯಿತಿಗಳಿಗೆ ಚುನಾವಣೆಗಳ ಸಂದರ್ಭದಲ್ಲಿ ಉಪಯೋಗಕ್ಕಾಗಿ)

**ಅಧಿಸೂಚನೆ**

**ಸಂಖ್ಯೆ: ಇಎಲ್ಎನ್(ಪಂ)ಸಿಆರ್.30/2012–13, ಬೆಂಗಳೂರು, ದಿನಾಂಕ : 28ನೇ ಜನವರಿ 2013**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಉಪಬಂಧಗಳ ಮೇರೆಗೆ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿ ತಾಲ್ಲೂಕಿನ 2013ರ ಫೆಬ್ರವರಿ ತಿಂಗಳಲ್ಲಿ ಸದಸ್ಯರುಗಳ ಪದಾವಧಿಯು ಮುಕ್ತಾಯವಾಗಲಿರುವ ಹಾರೋಹಳ್ಳಿ ಮತ್ತು ಕೋರಮಂಗಲ ಗ್ರಾಮ ಪಂಚಾಯಿತಿಯ ಸದಸ್ಯರುಗಳು ಹೊರಹೋಗುವ ಕಾರಣದಿಂದ ತೆರವಾಗುವ ಸ್ಥಾನಗಳನ್ನು ತುಂಬಲು ಈ ಕೆಳಕಾಣಿಸಿದ ಕ್ಷೇತ್ರಗಳಿಂದ ಆ ಗ್ರಾಮ ಪಂಚಾಯಿತಿಗಳ ಚುನಾವಣೆಯನ್ನು ನಡೆಸ ಬೇಕಾಗಿರುವುದರಿಂದ :–

| ಕ್ರ ಸಂ. | ತಾಲ್ಲೂಕು | ಗ್ರಾಮ ಪಂಚಾಯತಿ ಹೆಸರು | ಚುನಾವಣೆ ನಡೆಸುವ ಕ್ಷೇತ್ರಗಳ ಹೆಸರು | | ಒಟ್ಟು ಸದಸ್ಯ ಸ್ಥಾನಗಳ ಸಂಖ್ಯೆ |
|---|---|---|---|---|---|
| 1 | 2 | 3 | 4 | | 5 |
| | ದೇವನಹಳ್ಳಿ | 10–ಹಾರೋಹಳ್ಳಿ | 4 ಕ್ಷೇತ್ರಗಳು | ಹಾರೋಹಳ್ಳಿ | 11 |
| | | | | ಚಿಕ್ಕನಹಳ್ಳಿ | |
| | | | | ತಿಮ್ಮಹಳ್ಳಿ | |
| | | | | ಬುಳ್ಳಹಳ್ಳಿ | |
| | | 11–ಕೋರಮಂಗಲ | 3 ಕ್ಷೇತ್ರಗಳು | ಕೋರಮಂಗಲ–1 | 10 |
| | | | | ಕೋರಮಂಗಲ–2 | |
| | | | | ದಂಡಿಗಾನಹಳ್ಳಿ | |

ಕರ್ನಾಟಕ ಪಂಚಾಯತ್‌ರಾಜ್ (ಚುನಾವಣೆಯನ್ನು ನಡೆಸುವ) ನಿಯಮಗಳು 1993ರ ನಿಯಮ 12(2)ರ ಅನುಸಾರವಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ, ಜಿಲ್ಲಾಧಿಕಾರಿ ಶ್ರೀ ಎಂ.ಕೆ. ಅಯ್ಯಪ್ಪ, ಭಾ.ಆ.ಸೇ., ಆದ ನಾನು ಸದರಿ ಗ್ರಾಮ ಪಂಚಾಯತಿಯ ಚುನಾವಣೆಗೆ ಸಂಬಂಧಿಸಿದಂತೆ ಈ ಕೆಳಕಾಣಿಸಿದ ಚುನಾವಣಾ ವೇಳಾಪಟ್ಟಿಯನ್ನು ರಾಜ್ಯ ಚುನಾವಣಾ ಆಯೋಗದ ಆದೇಶ ಸಂ.ರಾಚುಆ.29.ಇಜಿಪಿ.2012, ದಿನಾಂಕ: 18–01–2013ರಂತೆ ಈ ಮೂಲಕ ನಿಗದಿಪಡಿಸುತ್ತೇನೆ.

| | | |
|---|---|---|
| 1 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 04–02–2013 (ಸೋಮವಾರ) |
| 2 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 05–02–2013 (ಮಂಗಳವಾರ) |
| 3 | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 07–02–2013 (ಗುರುವಾರ) |
| 4 | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಮತದಾನದ ಸಮಯ ಬೆಳಿಗ್ಗೆ 7.00 ಗಂಟೆಯಿಂದ ಸಂಜೆ 5.00 ಗಂಟೆಯವರೆಗೆ) | 17–02–2013 (ಭಾನುವಾರ) |
| 5 | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 19–02–2013 (ಮಂಗಳವಾರ) |
| 6 | ಮತಗಳ ಎಣಿಕೆ ದಿನಾಂಕ ಮತ್ತು ದಿನ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ – ಬೆಳಗ್ಗೆ 8.00 ಗಂಟೆಯಿಂದ ಪ್ರಾರಂಭವಾಗಿ ಮತ ಎಣಿಕೆ ಮುಗಿಯುವವರೆಗೆ) | 20.02.2013 (ಬುಧವಾರ) |
| 7 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 22.02.2013 (ಶುಕ್ರವಾರ) |

**ಎಂ.ಕೆ. ಅಯ್ಯಪ್ಪ**
ಜಿಲ್ಲಾಧಿಕಾರಿ ಮತ್ತು ಜಿಲ್ಲಾ ಚುನಾವಣಾಧಿಕಾರಿ,
ಬೆಂಗಳೂರು ಗ್ರಾಮಾಂತರ ಜಿಲ್ಲೆ.

ದಿನಾಂಕ: 28–1–2013
ಸ್ಥಳ: ಬೆಂಗಳೂರು


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| **ಭಾಗ – IV-A** | **ಬೆಂಗಳೂರು, ಸೋಮವಾರ, ಜನವರಿ ೨೮, ೨೦೧೩ (ಮಾಘ ೮, ಶಕ ವರ್ಷ ೧೯೩೪)** | **ನಂ. ೭೬** |
| ***Part – IV-A*** | ***Bangalore, Monday, January 28, 2013 (Magha 8, Shaka Varsha 1934)*** | ***No. 76*** |


## ಆರ್ಥಿಕ ಸಚಿವಾಲಯ

### ಅಧಿಸೂಚನೆ – I

**ಸಂಖ್ಯೆ : ಎಫ್‌ಡಿ 3 ಎಸ್ ಆರ್ ಎ 2012, ಬೆಂಗಳೂರು ದಿನಾಂಕ: 28ನೇ ಜನವರಿ, 2013**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳಿಗೆ ಇನ್ನಷ್ಟು ತಿದ್ದುಪಡಿ ಮಾಡುವ ನಿಯಮಗಳ ಕರಡನ್ನು ಅದರಿಂದ ತೊಂದರೆಗೊಳಗಾಗಬಹುದಾದ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ ಅಧಿಕೃತ ರಾಜ್ಯಪತ್ರದಲ್ಲಿ ಆ ಕರಡು ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಆಕ್ಷೇಪಣೆಗಳು/ಸಲಹೆಗಳನ್ನು ಆಹ್ವಾನಿಸಿ, ದಿನಾಂಕ: 23.11.2012ರಂದು ಕರ್ನಾಟಕ ರಾಜ್ಯಪತ್ರದ ಭಾಗ–4ಎ ರಲ್ಲಿ ಅಧಿಸೂಚನೆ–I ಸಂಖ್ಯೆ:ಎಫ್‌ಡಿ 03 ಎಸ್‌ಆರ್‌ಎ 2012, ದಿನಾಂಕ:23.11.2012 ನ್ನು ಕರ್ನಾಟಕ ರಾಜ್ಯ ನಾಗರೀಕ ಸೇವಾ ಅಧಿನಿಯಮ 1978ರ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 8 ರೊಂದಿಗೆ ಓದಿಕೊಳ್ಳಲಾಗುವ 3ನೇ ಪ್ರಕರಣದ (2)ನೇ ಉಪ ಪ್ರಕರಣದ ಖಂಡ(ಎ)ದ ಮೂಲಕ ಅಗತ್ಯಪಡಿಸಲಾದಂತೆ ಪ್ರಕಟಿಸಲಾಗಿರುವುದರಿಂದ;

ಸದರಿ ರಾಜ್ಯಪತ್ರವನ್ನು ದಿನಾಂಕ:23.11.2012ರಂದು ಸಾರ್ವಜನಿಕರಿಗೆ ದೊರೆಯುವಂತೆ ಮಾಡಲಾಗಿದ್ದುದರಿಂದ ಮತ್ತು ಇದರ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವುದೇ ರೀತಿಯ ಆಕ್ಷೇಪಣೆಗಳು/ಸಲಹೆಗಳು ಬಂದಿರುವುದಿಲ್ಲವಾದ್ದರಿಂದ;

ಈಗ 1978ರ ಕರ್ನಾಟಕ ರಾಜ್ಯ ನಾಗರೀಕ ಸೇವಾ ಅಧಿನಿಯಮದ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 8 ರೊಂದಿಗೆ ಓದಿಕೊಳ್ಳಲಾದ 3ನೇ ಪ್ರಕರಣ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಗಿನ ನಿಯಮಗಳನ್ನು ಈ ಮೂಲಕ ಮಾಡುತ್ತದೆ, ಎಂದರೆ:–

**ನಿಯಮಗಳು**

**1. ಶೀರ್ಷಿಕೆ ಮತ್ತು ಪ್ರಾರಂಭ–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (1ನೇ ತಿದ್ದುಪಡಿ) ನಿಯಮಗಳು 2013 ಎಂದು ಕರೆಯತಕ್ಕದ್ದು.

(2) ಇವು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಣೆಯಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 41 ಸಿ ನಿಯಮದ ತಿದ್ದುಪಡಿ:–** ಕರ್ನಾಟಕ ಸಿವಿಲ್ ಸೇವಾ ನಿಯಮಗಳಲ್ಲಿ (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ), 41 ಸಿ ನಿಯಮದ (v)ನೇ ಉಪಬಂಧದ ನಂತರ ಈ ಕೆಳಗಿನ ವಿವರಣೆಯನ್ನು ಸೇರಿಸತಕ್ಕದ್ದು ಎಂದರೆ.–

**ವಿವರಣೆ:** ಈ ಉಪಬಂಧದ ಸಲುವಾಗಿ ವೇತನದಲ್ಲಿ ಸರ್ಕಾರಿ ನೌಕರನು ಮಿಲಿಟರಿ ಸೇವೆಯಲ್ಲಿ ಅಂತಿಮವಾಗಿ ಪಡೆದ ಮೂಲವೇತನ, ಗ್ರೇಡ್ ಪೇ, ಎಕ್ಸ್ ಗ್ರೂಪ್ ಪೇ (ಎಲ್ಲೆಲ್ಲಿ ಅನ್ವಯಿಸುವುದೋ ಅಲ್ಲಿ) ಯನ್ನು ಒಳಗೊಳ್ಳುವುದು.

**3. 112ನೇ ನಿಯಮದ ತಿದ್ದುಪಡಿ:–** ಸದರಿ ನಿಯಮಗಳ 112ನೇ ನಿಯಮದ ಉಪ ನಿಯಮ (9)ರಲ್ಲಿನ "ಮತ್ತು 110ನೇಯ ನಿಯಮ" ಎಂಬ ಪದಗಳು ಮತ್ತು ಅಂಕಿಗಳನ್ನು ಬಿಟ್ಟುಬಿಡತಕ್ಕದ್ದು.

**4. 118–ಎ ರ ನಿಯಮದ ತಿದ್ದುಪಡಿ:–** ಸದರಿ ನಿಯಮಗಳ 118–ಎ ರ ಉಪ ನಿಯಮ (2)ರ ಉಪಬಂಧ (ಸಿ) ರ ನಂತರ ಈ ಕೆಳಗಿನ ವಿವರಣೆಯನ್ನು ಸೇರಿಸತಕ್ಕದ್ದು, ಎಂದರೆ.–

**ವಿವರಣೆ:** ಸೇವೆಯಲ್ಲಿದ್ದಾಗಲೇ ಮರಣ ಹೊಂದಿದ ನೌಕರರ ಪ್ರಕರಣದಲ್ಲಿ ನಿವೃತ್ತಿ ಸಮಯದಲ್ಲಿ ಗರಿಷ್ಠ ನಗದೀಕರಣ ಸೌಲಭ್ಯವನ್ನು ಪಾವತಿಸುವಲ್ಲಿ "ಕುಟುಂಬ" ಎಂಬ ಪದವು, ನಿಯಮ 302(i)ರಲ್ಲಿ ವಿವರಿಸಿದ ಅರ್ಥವನ್ನೇ ಹೊಂದಿರತಕ್ಕದ್ದು.

5. **152–ಎ ನೇ ನಿಯಮದ ತಿದ್ದುಪಡಿ:–** ಸದರಿ ನಿಯಮಗಳ ನಿಯಮ 152–ಎ ನ್ನು ಬಿಟ್ಟುಬಿಡತಕ್ಕದ್ದು.

6. **166ನೇ ನಿಯಮದ ತಿದ್ದುಪಡಿ:–** ಸದರಿ ನಿಯಮಗಳ ನಿಯಮ 166 ನ್ನು ಬಿಟ್ಟುಬಿಡತಕ್ಕದ್ದು.

7. **167ನೇ ನಿಯಮದ ತಿದ್ದುಪಡಿ:–** ಸದರಿ ನಿಯಮಗಳ ನಿಯಮ 167 ನ್ನು ಬಿಟ್ಟುಬಿಡತಕ್ಕದ್ದು.

8. **169ನೇ ನಿಯಮದ ತಿದ್ದುಪಡಿ:–** ಸದರಿ ನಿಯಮಗಳ ನಿಯಮ 169ರಡಿಯ ಟಿಪ್ಪಣಿ 3 ನ್ನು ಬಿಟ್ಟುಬಿಡತಕ್ಕದ್ದು.

**9. 197ನೇ ನಿಯಮದ ತಿದ್ದುಪಡಿ:–** ಸದರಿ ನಿಯಮಗಳ ನಿಯಮ 197ರಡಿಯ ವಿನಾಯತಿ 1 ಮತ್ತು ವಿನಾಯತಿ 2 ನ್ನು ಬಿಟ್ಟುಬಿಡತಕ್ಕದ್ದು.

**10. 224–ಎ ರ ನಿಯಮದ ತಿದ್ದುಪಡಿ:–** ಸದರಿ ನಿಯಮಗಳ ನಿಯಮ 224–ಎ ರ ನಂತರ ಈ ಕೆಳಗಿನ ವಿವರಣೆಯನ್ನು ಸೇರಿಸತಕ್ಕದ್ದು, ಎಂದರೆ.–

**ವಿವರಣೆ:** ಈ ನಿಯಮದಡಿ **"ತಾತ್ಕಾಲಿಕ ಸೇವೆಯೆಂದರೆ"** ತಾತ್ಕಾಲಿಕ ಹುದ್ದೆಯಲ್ಲಿ ಅಥವಾ ಸ್ಥಳೀಯ ಅಭ್ಯರ್ಥಿಯಾಗಿ ಅಥವಾ ಪರೀಕ್ಷಣಾ ಅವಧಿಯಲ್ಲಿ ಸಲ್ಲಿಸಿದ ಸೇವೆ ಎಂದು ಅರ್ಥ.

**11. 226ನೇ ನಿಯಮ ಮತ್ತು 227ನೇ ನಿಯಮದ ತಿದ್ದುಪಡಿ:–** ಸದರಿ ನಿಯಮಗಳ ನಿಯಮ 226 ಮತ್ತು ನಿಯಮ 227 ನ್ನು ಬಿಟ್ಟುಬಿಡತಕ್ಕದ್ದು.

**12. 292 –ಸಿ ನೇ ನಿಯಮದ ತಿದ್ದುಪಡಿ:–** ಸದರಿ ನಿಯಮಗಳ ನಿಯಮ 292–ಸಿ ಗೆ ಬದಲಾಗಿ ಈ ಕೆಳಗಿನದನ್ನು ಪ್ರತಿಸ್ಥಾಪಿಸತಕ್ಕದ್ದು, ಎಂದರೆ.–

**ನಿಯಮ 292 –ಸಿ. ವ್ಯಕ್ತಿಯು ಉಪದಾನ ಸ್ವೀಕರಿಸುವುದನ್ನು ನಿಷೇಧಿಸುವುದು.–** (1)ಸರ್ಕಾರಿ ನೌಕರನು ಸೇವೆಯಲ್ಲಿರುವಾಗ ಅಥವಾ ನಿವೃತ್ತಿಯ ತರುವಾಯ ಮರಣ ಹೊಂದಿದ ಸಂದರ್ಭದಲ್ಲಿ ಈ ನಿಯಮಗಳ ರೀತ್ಯ ಉಪದಾನ ಪಡೆಯಲು ಅರ್ಹನಿರುವ ವ್ಯಕ್ತಿಯು, ಯಾವುದೇ ತೀವ್ರ ಅಪರಾಧದ ಆರೋಪಿಯಾದರೆ ಅಥವಾ ಅಂತಹ ಅಪರಾಧವನ್ನು ಮಾಡುವುದಕ್ಕೆ ದುಷ್ಪ್ರೇರಣೆ ನೀಡಿದ ಅಪರಾಧದ ಆರೋಪಿಯಾದರೆ, ಉಪದಾನವನ್ನು ಪಡೆಯಲು ಹಕ್ಕುಳ್ಳ ಕುಟುಂಬದ ಇತರ ಅರ್ಹ ಸದಸ್ಯ ಸೇರಿದಂತೆ ವ್ಯಕ್ತಿಯ ಕ್ಲೇಮ್‌ನ್ನು ಅವನ ವಿರುದ್ಧ ಆರೋಪಿಸಲಾದ ಕ್ರಿಮಿನಲ್ ವ್ಯವಹರಣೆಗಳು ಮುಕ್ತಾಯವಾಗುವವರೆಗೆ ಅಮಾನತ್ತುಗೊಳಿಸತಕ್ಕದ್ದು.

(2). ಮೇಲಿನ ಉಪಖಂಡ (1)ರಲ್ಲಿ ಉಲ್ಲೇಖಿಸಲಾದ ಕ್ರಿಮಿನಲ್ ವ್ಯವಹರಣೆಯು ಮುಕ್ತಾಯವಾದ ನಂತರ ಸಂಬಂಧಪಟ್ಟ ವ್ಯಕ್ತಿಯು,

(ಎ) ಯಾವುದೇ ತೀವ್ರ ಅಪರಾಧ ಮಾಡಿದ್ದು ಸಿದ್ಧವಾದರೆ ಅಥವಾ ಅಂತಹ ಅಪರಾಧವನ್ನು ಮಾಡುವುದಕ್ಕೆ ದುಷ್ಪ್ರೇರಣೆ ನೀಡಿರುವನೆಂದು ಅಪರಾಧ ಸಿದ್ಧವಾದರೆ, ಅಂತಹ ವ್ಯಕ್ತಿಯನ್ನು ಉಪದಾನ ಪಡೆಯುವುದರಿಂದ ಅನರ್ಹಗೊಳಿಸತಕ್ಕದ್ದು ಮತ್ತು ಅಂತಹ ಪಾಲನ್ನು ಕುಟುಂಬದ ಇತರ ಅರ್ಹ ಸದಸ್ಯ ಅಥವಾ ಸದಸ್ಯರಿಗೆ ಸಂದಾಯ ಮಾಡತಕ್ಕದ್ದು.

(ಬಿ)ಯಾವುದೇ ತೀವ್ರ ಅಪರಾಧದ ಆರೋಪದಿಂದ ಅಥವಾ ಅಪರಾಧವನ್ನು ಮಾಡುವುದಕ್ಕೆ ದುಷ್ಪ್ರೇರಣೆ ನೀಡಿದ ಆರೋಪದಿಂದ ಮುಕ್ತನಾದರೆ ಉಪದಾನವನ್ನು ಅಂತಹ ವ್ಯಕ್ತಿಗೆ ಸಂದಾಯ ಮಾಡತಕ್ಕದ್ದು.

13. **439ನೇ ನಿಯಮದ ತಿದ್ದುಪಡಿ:–** ಸದರಿ ನಿಯಮಗಳ ನಿಯಮ 439ರಡಿಯ ಟಿಪ್ಪಣಿ 3 ರಲ್ಲಿ **"**ಅವನನ್ನು ಹಾಗೆ ಬಿಡುಗಡೆ ಮಾಡದಿದ್ದರೆ, 110ನೇ ನಿಯಮದ ಮೊದಲನೆಯ ಪರಂತುಕದ ಮೇರೆಗೆ ಅನುಮತಿಸಲ್ಪಡಬಹುದಾದಷ್ಟರ ಮಟ್ಟಿಗೆ ಸರ್ಕಾರಿ ಸೇವೆಯ ಹಿತದೃಷ್ಟಿಯಿಂದ ರಜೆಯನ್ನು ನಿರಾಕರಿಸಬೇಕು**"** ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

14. **446ನೇ ನಿಯಮದ ತಿದ್ದುಪಡಿ:–** ಸದರಿ ನಿಯಮಗಳ ನಿಯಮ 446ರ ಟಿಪ್ಪಣಿ–9ರಡಿ ಉಪಬಂಧ(ಸಿ) ಪರಂತುಕದಲ್ಲಿ "ಇನ್ನೂ ಒಂದು ವರ್ಷದವರೆಗೆ" ಎಂಬ ಪದಗಳಿಗೆ ಬದಲಾಗಿ "ಇನ್ನೂ ಮೂರು ವರ್ಷಗಳವರೆಗೆ" ಎಂಬ ಪದಗಳನ್ನು ಪ್ರತಿಸ್ಥಾಪಿಸತಕ್ಕದ್ದು.

15. **569ನೇ ನಿಯಮದ ತಿದ್ದುಪಡಿ:–** ಸದರಿ ನಿಯಮಗಳ ನಿಯಮ 569ರ ಉಪಬಂಧ (ಸಿ)ಗೆ ಬದಲಾಗಿ ಈ ಕೆಳಕಂಡದನ್ನು ಪ್ರತಿಸ್ಥಾಪಿಸತಕ್ಕದ್ದು, ಎಂದರೆ.–

"(ಸಿ) ಸರ್ಕಾರಿ ಸೇವೆಯಲ್ಲಿಲ್ಲದ ವ್ಯಕ್ತಿಗಳ ಸಂದರ್ಭದಲ್ಲಿ ಹೋಗಿಬರುವ ಪ್ರತಿ ಪ್ರಯಾಣಕ್ಕೂ ರೈಲಿನಲ್ಲಿ ಎ.ಸಿ. ತ್ರಿ ಟೈಯರ್/ಎ.ಸಿ. ಚೇರ್ ಕಾರ್ ಮತ್ತು ಬಸ್ಸುಗಳ ದರವನ್ನು ರಾಜಹಂಸ/ಸೆಮಿ ಡಿಲಕ್ಸ್ ದರಗಳಿಗೆ ಮೀರದಂತೆ ಬಸ್ಸು ದರವನ್ನು ಹಾಗೂ ರಾಜ್ಯದ ಒಳಗಡೆ, ಇತರ ನಗರಗಳಲ್ಲಿ ತಂಗಿದ ಪ್ರತಿ ದಿನಕ್ಕೆ ರೂ.100/– ಗಳನ್ನು ಮೀರದಂತೆ ದಿನಭತ್ಯೆ".

16. **ಪ್ರಪತ್ರ 11 ರ ತಿದ್ದುಪಡಿ:–** (1) ಸದರಿ ನಿಯಮಗಳ ಪ್ರಪತ್ರ 11 ರ ಉಪಬಂಧ (iii) ನ್ನು ಬಿಟ್ಟುಬಿಡತಕ್ಕದ್ದು.

(2) ಸದರಿ ನಿಯಮಗಳ ಪ್ರಪತ್ರ 11 ರ ಅಡಕಗಳ ಪಟ್ಟಿಯ ಕ್ರಮಸಂಖ್ಯೆ 4 ಮತ್ತು 7 ನ್ನು ಬಿಟ್ಟುಬಿಡತಕ್ಕದ್ದು.

ತಿದ್ದುಪಡಿ ಸಂ:1275

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆಲಿಸ್ ಗೊನ್ಸಾಲ್ವಿಸ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸೇವೆಗಳು–1)

## ಅಧಿಸೂಚನೆ – II

### ಸಂಖ್ಯೆ : ಎಫ್‌ಡಿ 3 ಎಸ್ ಆರ್ ಎ 2012, ಬೆಂಗಳೂರು, ದಿನಾಂಕ: 28ನೇ ಜನವರಿ, 2013

ಕರ್ನಾಟಕ ಸರ್ಕಾರಿ ನೌಕರರ (ಕುಟುಂಬ ನಿವೃತ್ತಿ ವೇತನ) ನಿಯಮಗಳು, 2002ಕ್ಕೆ ಇನ್ನಷ್ಟು ತಿದ್ದುಪಡಿ ಮಾಡುವ ನಿಯಮಗಳ ಕರಡನ್ನು ಅದರಿಂದ ತೊಂದರೆಗೊಳಗಾಗಬಹುದಾದ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ ಅಧಿಕೃತ ರಾಜ್ಯಪತ್ರದಲ್ಲಿ ಆ ಕರಡು ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಆಕ್ಷೇಪಣೆಗಳು/ ಸಲಹೆಗಳನ್ನು ಆಹ್ವಾನಿಸಿ, ದಿನಾಂಕ:23.11.2012ರಂದು ಕರ್ನಾಟಕ ರಾಜ್ಯಪತ್ರದ ಭಾಗ–4ಎ ರಲ್ಲಿ ಅಧಿಸೂಚನೆ–II ಸಂಖ್ಯೆ:ಎಫ್‌ಡಿ 03 ಎಸ್‌ಆರ್‌ಎ 2012, ದಿನಾಂಕ:23.11.2012 ನ್ನು ಕರ್ನಾಟಕ ರಾಜ್ಯ ನಾಗರೀಕ ಸೇವಾ ಅಧಿನಿಯಮ 1978ರ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 8ರೊಂದಿಗೆ ಓದಿಕೊಳ್ಳಲಾಗುವ 3ನೇ ಪ್ರಕರಣದ (2)ನೇ ಉಪ ಪ್ರಕರಣದ ಖಂಡ(ಎ)ದ ಮೂಲಕ ಅಗತ್ಯಪಡಿಸಲಾದಂತೆ ಪ್ರಕಟಿಸಲಾಗಿರುವುದರಿಂದ;

ಸದರಿ ರಾಜ್ಯಪತ್ರವನ್ನು ದಿನಾಂಕ:23.11.2012ರಂದು ಸಾರ್ವಜನಿಕರಿಗೆ ದೊರೆಯುವಂತೆ ಮಾಡಲಾಗಿದ್ದುದರಿಂದ ಮತ್ತು ಇದರ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವುದೇ ರೀತಿಯ ಆಕ್ಷೇಪಣೆಗಳು/ಸಲಹೆಗಳು ಬಂದಿರುವುದಿಲ್ಲವಾದ್ದರಿಂದ;

ಈಗ 1978ರ ಕರ್ನಾಟಕ ರಾಜ್ಯ ನಾಗರೀಕ ಸೇವಾ ಅಧಿನಿಯಮದ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 8 ರೊಂದಿಗೆ ಓದಿಕೊಳ್ಳಲಾದ 3ನೇ ಪ್ರಕರಣ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಗಿನ ನಿಯಮಗಳನ್ನು ಈ ಮೂಲಕ ಮಾಡುತ್ತದೆ, ಎಂದರೆ:–

### ನಿಯಮಗಳು

1. **ಶೀರ್ಷಿಕೆ ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು, ಕರ್ನಾಟಕ ಸರ್ಕಾರಿ ನೌಕರರ (ಕುಟುಂಬ ನಿವೃತ್ತಿ ವೇತನ) (1ನೇ ತಿದ್ದುಪಡಿ) ನಿಯಮಗಳು, 2013 ಎಂದು ಕರೆಯತಕ್ಕದ್ದು.

(2) ಇವು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಣೆಯಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ನಮೂನೆ–ಬಿ ಯ ಅನುಬಂಧಕ್ಕೆ ತಿದ್ದುಪಡಿ .–** ಕರ್ನಾಟಕ ಸರ್ಕಾರಿ ನೌಕರರ (ಕುಟುಂಬ ನಿವೃತ್ತಿ ವೇತನ) ನಿಯಮಗಳು 2002ರ, ನಮೂನೆ–ಬಿ ಯ ಅನುಬಂಧದ ಕ್ರಮಸಂಖ್ಯೆ 9 (6) ಕ್ಕೆ ಬದಲಾಗಿ ಈ ಕೆಳಕಂಡದನ್ನು ಪ್ರತಿಸ್ಥಾಪಿಸತಕ್ಕದ್ದು, ಎಂದರೆ.–

"ಸಹಜ ಪೋಷಕರು ಜೀವಂತವಿರದಿದ್ದ ಸಂದರ್ಭದಲ್ಲಿ ಅಪ್ರಾಪ್ತ ವಯಸ್ಕ ಮಕ್ಕಳಿಗೆ ಕುಟುಂಬ ನಿವೃತ್ತಿ ವೇತನವು ಅಂಗೀಕಾರಾರ್ಹವಾಗಿರುವಲ್ಲಿ The National Trust for Welfare of persons with Autism, Cerebral Palsy, Mental Retardation and Multiple Disabilities Act, 1999 (Central Act 44 of 1999) ರಡಿಯಲ್ಲಿನ ಪ್ರಕರಣಗಳಲ್ಲಿ **ಲೋಕಲ್ ಲೆವೆಲ್ ಕಮಿಟಿಯು** ನೀಡುವ ಮತ್ತು ಇನ್ನಿತರ ಪ್ರಕರಣಗಳಲ್ಲಿ ಅಧಿಕೃತ ನ್ಯಾಯಾಲಯವು Guardians and Wards Act 1890 ರಡಿಯಲ್ಲಿ ನೀಡುವ ಪೋಷಕ ಪ್ರಮಾಣ ಪತ್ರ".

ತಿದ್ದುಪಡಿ ಸಂ: 4

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆಲಿಸ್ ಗೊನ್ಸಾಲ್ವಿಸ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸೇವೆಗಳು–1)

| Sl. No. | Designation of the officer appointed | Assigned local limits |
|---|---|---|
| 1 | 2 | 3 |
| 22 | Deputy Director of Factories Division-1, Mangalore | Area comprising within the District of Dakshina Kannada, excluding the area of Mangalore taluka falling on the left side of National Highway No. 17 from the Border of State of Kerala up to the border of Udupi District |
| 23 | Assistant Director of Factories Division-2, Mangalore | Areas comprising within the Districts of Udupi and the area of Mangalore taluka falling on the left side of National Highway No. 17 from the Border of State of Kerala up to the border of Udupi District |
| 24 | Assistant Director of Factories Shimoga Division, Shimoga | Areas comprising within the Districts of Shimoga & Chikmagalur |
| 25 | Deputy Director of Factories Bellary Division, Bellary | Areas comprising within the limits of Bellary & Koppal |
| 26 | Assistant Director of Factories Davangere Division, Davangere | Areas comprising within the District limits of Chitradurga, Davangere and Haveri. |
| 27 | Assistant Director of Factories Raichur Division, Raichur | Area comprising within the limits of Raichur District |
| 28 | Assistant Director of Factories Gulbarga Division, Gulbarga | Areas comprising within the Districts of Gulbarga, Yadgiri & Bidar |
| 29 | Deputy Director of Factories Division-1, Belgaum | Areas comprising within the District of Belgaum, excluding part of Belgaum Taluka falling on the left side of NH-4A (Goa–Pune Road) starting from Khanapura taluka border of Belgaum District via. College Road, JN Medical College road through Chennamma Circle of Belgaum Mahanagara Palike up to the junction of NH4 and NH-4A and left side of NH-4 (Bangalore–Pune Road) up to Taluka border of Hukkeri |
| 30 | Senior Assistant Director of Factories Division-2, Belgaum | Areas of Belgaum Taluk falling on the left side of NH-4A (Goa–Pune Road) starting from Khanapura taluka border of Belgaum District via college Road, JN Medical College road through Chennamma Circle of Belgaum Mahanagara Palike up to the junction of NH4 and NH-4A and left side of NH-4 (Bangalore–Pune Road) up to Taluka border of Hukkeri and areas comprising within the District limits of Bijapur and Bagalkote |
| 31 | Senior Assistant Director of Factories Hubli Division, Hubli | Areas comprising within the District limits of Dharwad, Gadag & Uttara Kannada. |

By order and in the name of the Governer of Karnataka,

***B Shivarama Gowda***
Under Secretary to Government
Labour Department(Factories & Boilers

# ವಿಶೇಷ ರಾಜ್ಯ ಪತ್ರಿಕೆ

| ಭಾಗ - I | ಬೆಂಗಳೂರು, ಮಂಗಳವಾರ, ಜನವರಿ ೨೯, ೨೦೧೩ (ಮಾಘ ೯, ಶಕ ವರ್ಷ ೧೯೩೪) | ನಂ. ೮೫ |
|---|---|---|
| *Part - I* | *Bangalore, Tuesday, January 29, 2013 (Magha 9, Shaka Varsha 1934)* | *No. 85* |


## ಕರ್ನಾಟಕ ಸರ್ಕಾರದ ನಡವಳಿಗಳು

### ಕಾರ್ಮಿಕ ಸಚಿವಾಲಯ

**ವಿಷಯ:-** ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ವಿವಿಧ ಕಛೇರಿಗಳ ಪುನರ್ ರಚನೆ / ಪುನರ್‌ಸಂಘಟನೆಯಂತೆ ಪದನಾಮ ಬದಲಾಗಿ ಮರುಸ್ಥಾಪಿತಗೊಂಡ ಕಛೇರಿಗಳ ಬಗ್ಗೆ.

**ಓದಲಾಗಿದೆ;-**
1. ಸರ್ಕಾರದ ಅಧಿಸೂಚನೆ ಸಂಖ್ಯೆ ಕಾಇ 62 ಕಾಬಾಸೇ 2012(1), ದಿನಾಂಕ:29-01-2013
2. ನಿರ್ದೇಶಕರು, ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ ರವರ ಪ್ರಸ್ತಾವನೆ ಸಂ. ಕಾಬಾನಿ / ಇಎಸ್‌ಟಿ-1 / ಸಿಆರ್-86 / 2012-2013, ದಿನಾಂಕ: 20-11-2012
3. ನಿರ್ದೇಶಕರು, ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ ರವರ ಪ್ರಸ್ತಾವನೆ ಸಂ. ಕಾಬಾನಿ / ಇಎಸ್‌ಟಿ-1 / ಸಿಆರ್-71 / 2012-2013, ದಿನಾಂಕ: 20-11-2012

**ಪ್ರಸ್ತಾವನೆ:**

ಮೇಲೆ ಕ್ರಮಾಂಕ(1) ರಲ್ಲಿ ಓದಲಾದ ದಿನಾಂಕ: 29-1-2013 ರ ಸರ್ಕಾರದ ಅಧಿಸೂಚನೆಯಂತೆ ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ವಿವಿಧ ಕಛೇರಿಗಳು ಪುನರ್‌ಸಂಘಟನೆಯಾಗಿರುವ ಹಿನ್ನಲೆಯಲ್ಲಿ ಕೆಲವು ಕಛೇರಿಗಳ ಪದನಾಮ ಬದಲಾವಣೆಯಾಗಿ ಮರುಸ್ಥಾಪನೆಗೊಂಡಿರುತ್ತದೆ. ಪದನಾಮ ಬದಲಾವಣೆಯಾದ ಕಛೇರಿಗಳಿಗೆ ಸಂಬಂಧಿಸಿದಂತೆ ಖಜಾನೆಗಳಲ್ಲಿ ವೇತನ ಭತ್ಯೆ ಇತ್ಯಾದಿ ಬಿಲ್ಲುಗಳನ್ನು ಡ್ರಾ ಮಾಡಲು ಮಹಾಲೇಖಪಾಲರು ಹೊಸದಾಗಿ ಪ್ರಾಧಿಕಾರಣ ಪತ್ರ ನೀಡಬೇಕಾಗುತ್ತದೆಂದು ಮೇಲೆ ಕ್ರಮಾಂಕ (2) & (3) ರಲ್ಲಿ ಓದಲಾದ ದಿನಾಂಕ 20-11-2012 ರ ಪತ್ರಗಳೊಂದಿಗಿನ ಪ್ರಸ್ತಾವನೆಗಳಲ್ಲಿ ನಿರ್ದೇಶಕರು, ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ ರವರು ಈ ಬಗ್ಗೆ ಸರ್ಕಾರದ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ. ಅವರ ಪ್ರಸ್ತಾವನೆಗಳನ್ನು ಕೂಲಂಕುಶವಾಗಿ ಪರಿಶೀಲಿಸಿ, ವಿಭಾಗೀಯ ಕಛೇರಿಗಳ ಕೆಲಸ ಕಾರ್ಯಗಳ ಒತ್ತಡದಲ್ಲಿನ ಅಸಮಾನತೆ, ವಿಭಾಗೀಯ ಕಛೇರಿಗಳ ಕೇಂದ್ರ ಸ್ಥಾನದಿಂದ ಸದರಿ ಕಛೇರಿಗಳಿಗೆ ನಿರ್ಧಿಷ್ಟಪಡಿಸಿರುವ ಕ್ಷೇತ್ರ ಪರಿಮಿತಿಗಳ ದೂರ ಮತ್ತು ರಾಜ್ಯದಲ್ಲಿನ ಒಟ್ಟು ಕಾರ್ಖಾನೆಗಳು, ಅಪಾಯಕಾರಿ/ಅತೀ ಅಪಾಯಕಾರಿ ಕಾರ್ಖಾನೆಗಳು ಹಾಗೂ ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿ ಅಥವಾ ಯೋಜನೆಗಳು ಬೆಂಗಳೂರಿನಲ್ಲಿ ಶೇಕಡಾವಾರು ಪ್ರಮಾಣ 70 ಕ್ಕೂ ಮೀರಿರುತ್ತದೆಂದು ಪ್ರಸ್ಥಾಪಿಸಿರುವುದರಿಂದ ಪ್ರಸ್ಥಾಪಿತ ಕಾಯ್ದೆಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಿ ಕಾರ್ಮಿಕರಿಗೆ/ಸಾರ್ವಜನಿಕರಿಗೆ ಸೌಲಭ್ಯ/ಸೇವೆಗಳನ್ನು ಪರಿಣಾಮಕಾರಿಯಾಗಿ ಒದಗಿಸುವ ಹಿನ್ನಲೆಯಲ್ಲಿ ಸಾರ್ವಜನಿಕ ಹಿತದೃಷ್ಠಿಯಿಂದ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುವ ಕೆಲವು ಕಛೇರಿಗಳ ಸ್ಥಳಾಂತರವನ್ನು ಹೊರತುಪಡಿಸಿ ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ವಿಭಾಗ-2, ಹುಬ್ಬಳ್ಳಿ ಕಛೇರಿಯನ್ನು ಬೆಂಗಳೂರಿಗೆ ಸ್ಥಳಾಂತರಿಸುವುದನ್ನು ಸೇರ್ಪಡಿಸಿದಂತೆ ಕ್ಷೇತ್ರವ್ಯಾಪ್ತಿ ಪುನರ್ ರಚಿಸಿ ಆದೇಶ ಹೊರಡಿಸಿದೆ, ಪುನರ್ ರಚನೆಯಿಂದ ಕೆಲವು ಕಛೇರಿಗಳು ಸ್ಥಳಾಂತರಗೊಂಡು ಪುನರ್‌ಸಂಘಟನೆಯಾಗಿದ್ದು, ಅದರಂತೆ ಪದನಾಮ ಬದಲಾದ ಕಛೇರಿಗಳ ಪುನರ್‌ಸ್ಥಾಪನೆ ಅವಶ್ಯವಿರುವುದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 62 ಕಾಬಾಸೇ 2012(2), ಬೆಂಗಳೂರು, ದಿನಾಂಕ: 29ನೇ ಜನವರಿ 2013.**

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯಲ್ಲಿ ಕಛೇರಿಗಳ ಕೆಲಸ ಕಾರ್ಯಗಳ ಒತ್ತಡದಲ್ಲಿನ ಅಸಮಾನತೆ, ವಿಭಾಗೀಯ ಕಛೇರಿಗಳ ಕೇಂದ್ರ ಸ್ಥಾನದಿಂದ ಸದರಿ ಕಛೇರಿಗಳಿಗೆ ನಿರ್ಧಿಷ್ಟಪಡಿಸಿರುವ ಕ್ಷೇತ್ರ ಪರಿಮಿತಿಗಳ ದೂರ ಮತ್ತು ಪ್ರಸ್ಥಾಪಿತ ಕಾಯ್ದೆಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಿ ಕಾರ್ಮಿಕರಿಗೆ/ಸಾರ್ವಜನಿಕರಿಗೆ ಸೌಲಭ್ಯ/ಸೇವೆಗಳನ್ನು ಪರಿಣಾಮಕಾರಿಯಾಗಿ ಒದಗಿಸುವ ಹಿನ್ನಲೆಯಲ್ಲಿ ಕ್ರಮಾಂಕ(1) ರಲ್ಲಿ ಓದಲಾದ ದಿನಾಂಕ: 29-01-2013 ರ ಸರ್ಕಾರದ ಅಧಿಸೂಚನೆಯಂತೆ ಕ್ಷೇತ್ರವ್ಯಾಪ್ತಿ ಪುನರ್ ರಚನೆಯಿಂದ ಕೆಲವು ಕಛೇರಿಗಳು ಸ್ಥಳಾಂತರಗೊಂಡು ಪುನರ್‌ಸಂಘಟನೆಯಾಗಿದ್ದು, ಅದರಂತೆ ಪದನಾಮ ಬದಲಾವಣೆಯಾಗಿರುವುದರಿಂದ ಅಂತಹ ಕಛೇರಿಗಳನ್ನು ಕೆಳಗಿನಂತೆ ಗುರುತಿಸಿ ಕಾಲಂ-3 ರಲ್ಲಿ ನಮೂದಿಸಿರುವಂತೆ ಬದಲಾದ ಪದನಾಮಗಳೊಡನೆ ತಕ್ಷಣದಿಂದ ಜಾರಿಗೆ ಬರುವಂತೆ ಪುನರ್‌ಸ್ಥಾಪಿಸಿ ಆದೇಶ ಹೊರಡಿಸಿದೆ.

| ಕ್ರ. ಸಂ | ಹಾಲಿ ಕಾರ್ಯನಿರ್ವಹಿಸುತ್ತಿರುವ ಕಛೇರಿಗಳ ಪದನಾಮ | ಸ್ಥಳಾಂತರಗೊಂಡನಂತರ ಮರುರುಸ್ಥಾಪನೆಗೊಳ್ಳಬೇಕಾಗಿರುವ ಕಾಲಂ- 2 ರ ಕಛೇರಿಗಳ ಪದನಾಮ |
|---|---|---|
| **1** | **2** | **3** |
| 1 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು,<br>ವಿಭಾಗ-2, ಮೈಸೂರು<br>(ಈ ಕಛೇರಿಯನ್ನು ತುಮಕೂರಿಗೆ ಸ್ಥಳಾಂತರಿಸಿ ಮುಂದಿನಂತೆ ಸ್ಥಾಪಿಸಿದೆ) | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು,<br>ತುಮಕೂರು ವಿಭಾಗ, ತುಮಕೂರು |
| 2 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು,<br>ತುಮಕೂರು ವಿಭಾಗ, ತುಮಕೂರು<br>(ಈ ಕಛೇರಿಯನ್ನು ಮೈಸೂರಿಗೆ ಸ್ಥಳಾಂತರಿಸಿ ಮುಂದಿನಂತೆ ಸ್ಥಾಪಿಸಿದೆ) | ಕಾರ್ಖಾನೆಗಳ ಸಹಾಯಕ ನಿರ್ದೇಶಕರು,<br>ವಿಭಾಗ-2, ಮೈಸೂರು |

| ಕ್ರ. ಸಂ | ಹಾಲಿ ಕಾರ್ಯನಿರ್ವಹಿಸುತ್ತಿರುವ ಕಛೇರಿಗಳ ಪದನಾಮ | ಸ್ಥಳಾಂತರಗೊಂಡನಂತರ ಮರುರುಸ್ಥಾಪನೆಗೊಳ್ಳಬೇಕಾಗಿರುವ ಕಾಲಂ– 2 ರ ಕಛೇರಿಗಳ ಪದನಾಮ |
|---|---|---|
| 1 | 2 | 3 |
| 3 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–2, ಮಂಗಳೂರು (ಈ ಕಛೇರಿಯನ್ನು ಬೆಂಗಳೂರಿಗೆ ಸ್ಥಳಾಂತರಿಸಿ ಮುಂದಿನಂತೆ ಸ್ಥಾಪಿಸಿದೆ) | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–10, ಬೆಂಗಳೂರು |
| 4 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ವಿಭಾಗ–10, ಬೆಂಗಳೂರು (ಈ ಕಛೇರಿಯನ್ನು ಮಂಗಳೂರಿಗೆ ಸ್ಥಳಾಂತರಿಸಿ ಮುಂದಿನಂತೆ ಸ್ಥಾಪಿಸಿದೆ) | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ವಿಭಾಗ–2, ಮಂಗಳೂರು |
| 5 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ವಿಭಾಗ–2, ಹುಬ್ಬಳ್ಳಿ (ಈ ಕಛೇರಿಯನ್ನು ಬೆಂಗಳೂರಿಗೆ ಸ್ಥಳಾಂತರಿಸಿ ಮುಂದಿನಂತೆ ಸ್ಥಾಪಿಸಿದೆ) | ಕಾರ್ಖಾನೆಗಳ ಸಹಾಯಕ ನಿರ್ದೇಶಕರು, ವಿಭಾಗ–15, ಬೆಂಗಳೂರು |
| 6 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ವಿಭಾಗ–1, ಹುಬ್ಬಳ್ಳಿ (ಈ ಕಛೇರಿಯನ್ನು ಹುಬ್ಬಳ್ಳಿಯಲ್ಲಿಯೇ ಮುಂದಿನಂತೆ ಸ್ಥಾಪಿಸಿದೆ) | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು, ಹುಬ್ಬಳ್ಳಿ ವಿಭಾಗ, ಹುಬ್ಬಳ್ಳಿ |

ಕಛೇರಿಗಳ ಪುನರ್ ಸಂಘಟನೆಯ ಕಾರಣ ಮರುಸ್ಥಾಪನೆಗೊಂಡಿರುವ ಕಛೇರಿಗಳು ನಿಗದಿತ ಸ್ಥಳಗಳಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಕಾರ್ಯನಿರ್ವಹಣೆ ಮಾಡುವುದು. ಉಳಿದ ಕಛೇರಿಗಳಿಗೆ ಸಂಬಂಧಿಸಿದಂತೆ ಪದನಾಮ ಅಥವಾ ಸ್ಥಳ ಬದಲಾವಣೆ ಆಗಿಲ್ಲದ ಕಾರಣ ಅವುಗಳು ಈ ಹಿಂದಿನಂತೆಯೇ ಆಯಾಯ ಸ್ಥಳಗಳಲ್ಲಿ ಕಾರ್ಯನಿರ್ವಹಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ ಶಿವರಾಮ ಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ
(ಕಾರ್ಖಾನೆಗಳು ಮತ್ತು ಬಾಯ್ಲರುಗಳು)


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – *IV-A* | ಬೆಂಗಳೂರು, ಮಂಗಳವಾರ, ಜನವರಿ ೨೯, ೨೦೧೩ (ಮಾಘ ೯, ಶಕ ವರ್ಷ ೧೯೩೪) | ನಂ. ೮೬ |
| ***Part – IV-A*** | ***Bangalore, Tuesday, January 29, 2013 (Magha 9, Shaka Varsha 1934)*** | ***No. 86*** |


## ಕರ್ನಾಟಕ ವಿಧಾನಸಭೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ವಿಸಸ/ಶಾರಶಾ/ಸರಾ/790/2013, ಬೆಂಗಳೂರು, ದಿನಾಂಕ: 29ನೇ ಜನವರಿ, 2013**

ಕುಂದಗೋಳ ವಿಧಾನಸಭಾ ಕ್ಷೇತ್ರ ಸಂಖ್ಯೆ: 70 ರಿಂದ ಹದಿಮೂರನೇ ವಿಧಾನಸಭೆಗೆ ಚುನಾಯಿತರಾಗಿದ್ದ ಶ್ರೀ **ಚಿಕ್ಕನಗೌಡ್ರ** ಸಿದ್ದನಗೌಡ **ಈಶ್ವರಗೌಡ** ಅವರು ವಿಧಾನಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದ್ದು, ಸದರಿ ರಾಜೀನಾಮೆಯನ್ನು ವಿಧಾನಸಭೆಯ ಮಾನ್ಯ ಸಭಾಧ್ಯಕ್ಷರು ದಿನಾಂಕ 29ನೇ ಜನವರಿ 2013ರ ಅಪರಾಹ್ನದಿಂದ ಜಾರಿಗೆ ಬರುವಂತೆ ಅಂಗೀಕರಿಸಿರುತ್ತಾರೆ. ಆದುದರಿಂದ ವಿಧಾನಸಭೆಯಲ್ಲಿ ಒಂದು ಸ್ಥಾನವು ತೆರವಾಗಿರುತ್ತದೆ.

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

## *KARNATAKA LEGISLATIVE ASSEMBLY SECRETARIAT*

### *NOTIFICATION*

***No: LAS/LEG/MR/790/2013, Bangalore, Dated: 29th January, 2013***

***Shri Chikkanagoudra Siddangouda Ishwaragouda***, Member, Legislative Assembly elected to the Thirteenth Assembly from Kundgol Constituency, No. 70 has tendered his resignation to the Membership of Legislative Assembly and the same has been accepted by the Hon'ble Speaker, Legislative Assembly on 29th January, 2013 (Afternoon). Hence, one seat in the Legislative Assembly has fallen vacant.

***P. Omprakasha***
Secretary
Karnataka Legislative Assembly

# ವಿಶೇಷ ರಾಜ್ಯ ಪತ್ರಿಕೆ


| ಭಾಗ – IV-A | ಬೆಂಗಳೂರು, ಮಂಗಳವಾರ, ಜನವರಿ ೨೯, ೨೦೧೩ (ಮಾಘ ೯, ಶಕ ವರ್ಷ ೧೯೩೪) | ನಂ. ೮೭ |
|---|---|---|
| ***Part – IV-A*** | ***Bangalore, Tuesday, January 29, 2013 (Magha 9, Shaka Varsha 1934)*** | ***No. 87*** |


**ಕರ್ನಾಟಕ ವಿಧಾನಸಭೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ವಿಸಸ/ಶಾರಶಾ/ಸರಾ/781/2013, ಬೆಂಗಳೂರು, ದಿನಾಂಕ: 29ನೇ ಜನವರಿ, 2013**

ಬಸವಕಲ್ಯಾಣ ವಿಧಾನಸಭಾ ಕ್ಷೇತ್ರ ಸಂಖ್ಯೆ: 47 ರಿಂದ ಹದಿಮೂರನೇ ವಿಧಾನಸಭೆಗೆ ಚುನಾಯಿತರಾಗಿದ್ದ ಶ್ರೀ **ಬಸವರಾಜ್ ಪಾಟೀಲ್ ಅಟ್ಟೂರ್** ಅವರು ವಿಧಾನಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದ್ದು, ಸದರಿ ರಾಜೀನಾಮೆಯನ್ನು ವಿಧಾನಸಭೆಯ ಮಾನ್ಯ ಸಭಾಧ್ಯಕ್ಷರು ದಿನಾಂಕ 29ನೇ ಜನವರಿ 2013ರ ಅಪರಾಹ್ನದಿಂದ ಜಾರಿಗೆ ಬರುವಂತೆ ಅಂಗೀಕರಿಸಿರುತ್ತಾರೆ. ಆದುದರಿಂದ ವಿಧಾನಸಭೆಯಲ್ಲಿ ಒಂದು ಸ್ಥಾನವು ತೆರವಾಗಿರುತ್ತದೆ.

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

***KARNATAKA LEGISLATIVE ASSEMBLY SECRETARIAT***

***NOTIFICATION***

***No: LAS/LEG/MR/781/2013, Bangalore, Dated: 29th January, 2013***

***Shri Basavaraj Patil Attur***, Member, Legislative Assembly elected to the Thirteenth Assembly from Basavakalyana Constituency, No. 47 has tendered his resignation to the Membership of Legislative Assembly and the same has been accepted by the Hon'ble Speaker, Legislative Assembly on 29th January, 2013 (Afternoon). Hence, one seat in the Legislative Assembly has fallen vacant.

***P. Omprakasha***
Secretary
Karnataka Legislative Assembly

# ವಿಶೇಷ ರಾಜ್ಯ ಪತ್ರಿಕೆ


| ಭಾಗ – IV-A | ಬೆಂಗಳೂರು, ಮಂಗಳವಾರ, ಜನವರಿ ೨೯, ೨೦೧೩ (ಮಾಘ ೯, ಶಕ ವರ್ಷ ೧೯೩೪) | ನಂ. ೮೮ |
|---|---|---|
| ***Part – IV-A*** | ***Bangalore, Tuesday, January 29, 2013 (Magha 9, Shaka Varsha 1934)*** | ***No. 88*** |


**ಕರ್ನಾಟಕ ವಿಧಾನಸಭೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ವಿಸಸ/ಶಾರಶಾ/ಸರಾ/782/2013, ಬೆಂಗಳೂರು, ದಿನಾಂಕ: 29ನೇ ಜನವರಿ, 2013**

ಹೊಳಲ್ಕೆರೆ (ಪ.ಜಾ.) ವಿಧಾನಸಭಾ ಕ್ಷೇತ್ರ ಸಂಖ್ಯೆ: 102 ರಿಂದ ಹದಿಮೂರನೇ ವಿಧಾನಸಭೆಗೆ ಚುನಾಯಿತರಾಗಿದ್ದ ಶ್ರೀ **ಎಂ. ಚಂದ್ರಪ್ಪ** ಅವರು ವಿಧಾನಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದ್ದು, ಸದರಿ ರಾಜೀನಾಮೆಯನ್ನು ವಿಧಾನಸಭೆಯ ಮಾನ್ಯ ಸಭಾಧ್ಯಕ್ಷರು ದಿನಾಂಕ 29ನೇ ಜನವರಿ 2013ರ ಅಪರಾಹ್ನದಿಂದ ಜಾರಿಗೆ ಬರುವಂತೆ ಅಂಗೀಕರಿಸಿರುತ್ತಾರೆ. ಆದುದರಿಂದ ವಿಧಾನಸಭೆಯಲ್ಲಿ ಒಂದು ಸ್ಥಾನವು ತೆರವಾಗಿರುತ್ತದೆ.

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

***KARNATAKA LEGISLATIVE ASSEMBLY SECRETARIAT***

***NOTIFICATION***

***No: LAS/LEG/MR/782/2013, Bangalore, Dated: 29th January, 2013***

***Shri M. Chandrappa***, Member, Legislative Assembly elected to the Thirteenth Assembly from Holalkere (SC) Constituency, No. 102 has tendered his resignation to the Membership of Legislative Assembly and the same has been accepted by the Hon'ble Speaker, Legislative Assembly on 29th January, 2013 (Afternoon). Hence, one seat in the Legislative Assembly has fallen vacant.

***P. Omprakasha***
Secretary
Karnataka Legislative Assembly

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜನವರಿ ೨೯, ೨೦೧೩ (ಮಾಘ ೯, ಶಕ ವರ್ಷ ೧೯೩೪) | ನಂ. ೮೯ |
|---|---|---|
| ***Part – IV-A*** | ***Bangalore, Tuesday, January 29, 2013 (Magha 9, Shaka Varsha 1934)*** | ***No. 89*** |

**ಕರ್ನಾಟಕ ವಿಧಾನಸಭೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ವಿಸಸ/ಶಾರಶಾ/ಸರಾ/783/2013, ಬೆಂಗಳೂರು, ದಿನಾಂಕ: 29ನೇ ಜನವರಿ, 2013**

ರಾಣೆಬೆನ್ನೂರು ವಿಧಾನಸಭಾ ಕ್ಷೇತ್ರ ಸಂಖ್ಯೆ: 87 ರಿಂದ ಹದಿಮೂರನೇ ವಿಧಾನಸಭೆಗೆ ಚುನಾಯಿತರಾಗಿದ್ದ **ಶ್ರೀ ಜಿ. ಶಿವಣ್ಣ** ಅವರು ವಿಧಾನಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದ್ದು, ಸದರಿ ರಾಜೀನಾಮೆಯನ್ನು ವಿಧಾನಸಭೆಯ ಮಾನ್ಯ ಸಭಾಧ್ಯಕ್ಷರು ದಿನಾಂಕ 29ನೇ ಜನವರಿ 2013ರ ಅಪರಾಹ್ನದಿಂದ ಜಾರಿಗೆ ಬರುವಂತೆ ಅಂಗೀಕರಿಸಿರುತ್ತಾರೆ. ಆದುದರಿಂದ ವಿಧಾನಸಭೆಯಲ್ಲಿ ಒಂದು ಸ್ಥಾನವು ತೆರವಾಗಿರುತ್ತದೆ.

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

***KARNATAKA LEGISLATIVE ASSEMBLY SECRETARIAT***

***NOTIFICATION***

***No: LAS/LEG/MR/783/2013, Bangalore, Dated: 29th January, 2013***

***Shri G. Shivanna***, Member, Legislative Assembly elected to the Thirteenth Assembly from Ranibennur Constituency, No. 87 has tendered his resignation to the Membership of Legislative Assembly and the same has been accepted by the Hon'ble Speaker, Legislative Assembly on 29th January, 2013 (Afternoon). Hence, one seat in the Legislative Assembly has fallen vacant.

***P. Omprakasha***
Secretary
Karnataka Legislative Assembly

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜನವರಿ ೨೯, ೨೦೧೩ (ಮಾಘ ೯, ಶಕ ವರ್ಷ ೧೯೩೪) | ನಂ. ೯೦ |
|---|---|---|
| ***Part – IV-A*** | ***Bangalore, Tuesday, January 29, 2013 (Magha 9, Shaka Varsha 1934)*** | ***No. 90*** |

**ಕರ್ನಾಟಕ ವಿಧಾನಸಭೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ವಿಸಸ/ಶಾರಶಾ/ಸರಾ/784/2013, ಬೆಂಗಳೂರು, ದಿನಾಂಕ: 29ನೇ ಜನವರಿ, 2013**

ಸೊರಬ ವಿಧಾನಸಭಾ ಕ್ಷೇತ್ರ ಸಂಖ್ಯೆ: 116 ರಿಂದ ಹದಿಮೂರನೇ ವಿಧಾನಸಭೆಗೆ ಚುನಾಯಿತರಾಗಿದ್ದ **ಶ್ರೀ ಹೆಚ್. ಹಾಲಪ್ಪ** ಅವರು ವಿಧಾನಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದ್ದು, ಸದರಿ ರಾಜೀನಾಮೆಯನ್ನು ವಿಧಾನಸಭೆಯ ಮಾನ್ಯ ಸಭಾಧ್ಯಕ್ಷರು ದಿನಾಂಕ 29ನೇ ಜನವರಿ 2013ರ ಅಪರಾಹ್ನದಿಂದ ಜಾರಿಗೆ ಬರುವಂತೆ ಅಂಗೀಕರಿಸಿರುತ್ತಾರೆ. ಆದುದರಿಂದ ವಿಧಾನಸಭೆಯಲ್ಲಿ ಒಂದು ಸ್ಥಾನವು ತೆರವಾಗಿರುತ್ತದೆ.

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

***KARNATAKA LEGISLATIVE ASSEMBLY SECRETARIAT***

***NOTIFICATION***

***No: LAS/LEG/MR/784/2013, Bangalore, Dated: 29th January, 2013***

***Shri H. Halappa***, Member, Legislative Assembly elected to the Thirteenth Assembly from Soraba Constituency, No. 116 has tendered his resignation to the Membership of Legislative Assembly and the same has been accepted by the Hon'ble Speaker, Legislative Assembly on 29th January, 2013 (Afternoon). Hence, one seat in the Legislative Assembly has fallen vacant.

***P. Omprakasha***
Secretary
Karnataka Legislative Assembly

# ವಿಶೇಷ ರಾಜ್ಯ ಪತ್ರಿಕೆ


| | | |
|---|---|---|
| ಭಾಗ – **IV-A** | **ಬೆಂಗಳೂರು, ಮಂಗಳವಾರ, ಜನವರಿ ೨೯, ೨೦೧೩ (ಮಾಘ ೯, ಶಕ ವರ್ಷ ೧೯೩೪)** | **ನಂ.೯೧** |
| ***Part – IV-A*** | ***Bangalore, Tuesday, January 29, 2013 (Magha 9, Shaka Varsha 1934)*** | ***No. 91*** |


**ಕರ್ನಾಟಕ ವಿಧಾನಸಭೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ವಿಸಸ/ಶಾರಶಾ/ಸರಾ/785/2013, ಬೆಂಗಳೂರು, ದಿನಾಂಕ: 29ನೇ ಜನವರಿ, 2013**

ಯಶವಂತಪುರ ವಿಧಾನಸಭಾ ಕ್ಷೇತ್ರ ಸಂಖ್ಯೆ: 153 ರಿಂದ ಹದಿಮೂರನೇ ವಿಧಾನಸಭೆಗೆ ಚುನಾಯಿತರಾಗಿದ್ದ **ಕು. ಶೋಭಾ ಕರಂದ್ಲಾಜೆ** ಅವರು ವಿಧಾನಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದ್ದು, ಸದರಿ ರಾಜೀನಾಮೆಯನ್ನು ವಿಧಾನಸಭೆಯ ಮಾನ್ಯ ಸಭಾಧ್ಯಕ್ಷರು ದಿನಾಂಕ 29ನೇ ಜನವರಿ 2013ರ ಅಪರಾಹ್ನದಿಂದ ಜಾರಿಗೆ ಬರುವಂತೆ ಅಂಗೀಕರಿಸಿರುತ್ತಾರೆ. ಆದುದರಿಂದ ವಿಧಾನಸಭೆಯಲ್ಲಿ ಒಂದು ಸ್ಥಾನವು ತೆರವಾಗಿರುತ್ತದೆ.

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

***KARNATAKA LEGISLATIVE ASSEMBLY SECRETARIAT***

***NOTIFICATION***

***No: LAS/LEG/MR/785/2013, Bangalore, Dated: 29th January, 2013***

***Kum. Shobha Karandlaje***, Member, Legislative Assembly elected to the Thirteenth Assembly from Yeshvanthpura Constituency, No. 153 has tendered his resignation to the Membership of Legislative Assembly and the same has been accepted by the Hon'ble Speaker, Legislative Assembly on 29th January, 2013 (Afternoon). Hence, one seat in the Legislative Assembly has fallen vacant.

***P. Omprakasha***
Secretary
Karnataka Legislative Assembly

# ವಿಶೇಷ ರಾಜ್ಯ ಪತ್ರಿಕೆ


| | | |
|---|---|---|
| ಭಾಗ – **IV-A** | **ಬೆಂಗಳೂರು, ಮಂಗಳವಾರ, ಜನವರಿ ೨೯, ೨೦೧೩ (ಮಾಘ ೯, ಶಕ ವರ್ಷ ೧೯೩೪)** | **ನಂ.೯೨** |
| ***Part – IV-A*** | ***Bangalore, Tuesday, January 29, 2013 (Magha 9, Shaka Varsha 1934)*** | ***No. 92*** |


**ಕರ್ನಾಟಕ ವಿಧಾನಸಭೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ವಿಸಸ/ಶಾರಶಾ/ಸರಾ/786/2013, ಬೆಂಗಳೂರು, ದಿನಾಂಕ: 29ನೇ ಜನವರಿ, 2013**

ಹಾನಗಲ್ ವಿಧಾನಸಭಾ ಕ್ಷೇತ್ರ ಸಂಖ್ಯೆ: 82 ರಿಂದ ಹದಿಮೂರನೇ ವಿಧಾನಸಭೆಗೆ ಚುನಾಯಿತರಾಗಿದ್ದ **ಶ್ರೀ ಉದಾಸಿ ಚನ್ನಬಸಪ್ಪ ಮಹಾಲಿಂಗಪ್ಪ** ಅವರು ವಿಧಾನಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದ್ದು, ಸದರಿ ರಾಜೀನಾಮೆಯನ್ನು ವಿಧಾನಸಭೆಯ ಮಾನ್ಯ ಸಭಾಧ್ಯಕ್ಷರು ದಿನಾಂಕ 29ನೇ ಜನವರಿ 2013ರ ಅಪರಾಹ್ನದಿಂದ ಜಾರಿಗೆ ಬರುವಂತೆ ಅಂಗೀಕರಿಸಿರುತ್ತಾರೆ. ಆದುದರಿಂದ ವಿಧಾನಸಭೆಯಲ್ಲಿ ಒಂದು ಸ್ಥಾನವು ತೆರವಾಗಿರುತ್ತದೆ.

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

***KARNATAKA LEGISLATIVE ASSEMBLY SECRETARIAT***

***NOTIFICATION***

***No: LAS/LEG/MR/786/2013, Bangalore, Dated: 29th January, 2013***

***Shri Udasi Channabasappa Mahalingappa***, Member, Legislative Assembly elected to the Thirteenth Assembly from Hangal Constituency, No. 82 has tendered his resignation to the Membership of Legislative Assembly and the same has been accepted by the Hon'ble Speaker, Legislative Assembly on 29th January, 2013 (Afternoon). Hence, one seat in the Legislative Assembly has fallen vacant.

***P. Omprakasha***
Secretary
Karnataka Legislative Assembly

# ವಿಶೇಷ ರಾಜ್ಯ ಪತ್ರಿಕೆ

| ಭಾಗ – ***IV-A*** | **ಬೆಂಗಳೂರು, ಮಂಗಳವಾರ, ಜನವರಿ ೨೯, ೨೦೧೩ (ಮಾಘ ೯, ಶಕ ವರ್ಷ ೧೯೩೪)** | **ನಂ.೯೩** |
|---|---|---|
| ***Part – IV-A*** | ***Bangalore, Tuesday, January 29, 2013 (Magha 9, Shaka Varsha 1934)*** | ***No. 93*** |

**ಕರ್ನಾಟಕ ವಿಧಾನಸಭೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ವಿಸಸ/ಶಾರಶಾ/ಸರಾ/787/2013, ಬೆಂಗಳೂರು, ದಿನಾಂಕ: 29ನೇ ಜನವರಿ, 2013**

ಹರಿಹರ ವಿಧಾನಸಭಾ ಕ್ಷೇತ್ರ ಸಂಖ್ಯೆ: 105 ರಿಂದ ಹದಿಮೂರನೇ ವಿಧಾನಸಭೆಗೆ ಚುನಾಯಿತರಾಗಿದ್ದ ಶ್ರೀ **ಬಿ.ಪಿ. ಹರೀಶ್** ಅವರು ವಿಧಾನಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದ್ದು, ಸದರಿ ರಾಜೀನಾಮೆಯನ್ನು ವಿಧಾನಸಭೆಯ ಮಾನ್ಯ ಸಭಾಧ್ಯಕ್ಷರು ದಿನಾಂಕ 29ನೇ ಜನವರಿ 2013ರ ಅಪರಾಹ್ನದಿಂದ ಜಾರಿಗೆ ಬರುವಂತೆ ಅಂಗೀಕರಿಸಿರುತ್ತಾರೆ. ಆದುದರಿಂದ ವಿಧಾನಸಭೆಯಲ್ಲಿ ಒಂದು ಸ್ಥಾನವು ತೆರವಾಗಿರುತ್ತದೆ.

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

***KARNATAKA LEGISLATIVE ASSEMBLY SECRETARIAT***

***NOTIFICATION***

***No: LAS/LEG/MR/787/2013, Bangalore, Dated: 29th January, 2013***

***Shri B.P. Harish***, Member, Legislative Assembly elected to the Thirteenth Assembly from Harihara Constituency, No. 105 has tendered his resignation to the Membership of Legislative Assembly and the same has been accepted by the Hon'ble Speaker, Legislative Assembly on 29th January, 2013 (Afternoon). Hence, one seat in the Legislative Assembly has fallen vacant.

***P. Omprakasha***
Secretary
Karnataka Legislative Assembly

# ವಿಶೇಷ ರಾಜ್ಯ ಪತ್ರಿಕೆ

| ಭಾಗ – ***IV-A*** | **ಬೆಂಗಳೂರು, ಮಂಗಳವಾರ, ಜನವರಿ ೨೯, ೨೦೧೩ (ಮಾಘ ೯, ಶಕ ವರ್ಷ ೧೯೩೪)** | **ನಂ.೯೪** |
|---|---|---|
| ***Part – IV-A*** | ***Bangalore, Tuesday, January 29, 2013 (Magha 9, Shaka Varsha 1934)*** | ***No. 94*** |

**ಕರ್ನಾಟಕ ವಿಧಾನಸಭೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ವಿಸಸ/ಶಾರಶಾ/ಸರಾ/788/2013, ಬೆಂಗಳೂರು, ದಿನಾಂಕ: 29ನೇ ಜನವರಿ, 2013**

ಚಿಂಚೋಳಿ (ಪ.ಜಾ. ಮೀಸಲು) ವಿಧಾನಸಭಾ ಕ್ಷೇತ್ರ ಸಂಖ್ಯೆ: 42 ರಿಂದ ಹದಿಮೂರನೇ ವಿಧಾನಸಭೆಗೆ ಚುನಾಯಿತರಾಗಿದ್ದ ಶ್ರೀ **ಸುನೀಲ ವಲ್ಲ್ಯಾಪುರ** ಅವರು ವಿಧಾನಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದ್ದು, ಸದರಿ ರಾಜೀನಾಮೆಯನ್ನು ವಿಧಾನಸಭೆಯ ಮಾನ್ಯ ಸಭಾಧ್ಯಕ್ಷರು ದಿನಾಂಕ 29ನೇ ಜನವರಿ 2013ರ ಅಪರಾಹ್ನದಿಂದ ಜಾರಿಗೆ ಬರುವಂತೆ ಅಂಗೀಕರಿಸಿರುತ್ತಾರೆ. ಆದುದರಿಂದ ವಿಧಾನಸಭೆಯಲ್ಲಿ ಒಂದು ಸ್ಥಾನವು ತೆರವಾಗಿರುತ್ತದೆ.

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

***KARNATAKA LEGISLATIVE ASSEMBLY SECRETARIAT***

***NOTIFICATION***

***No: LAS/LEG/MR/788/2013, Bangalore, Dated: 29th January, 2013***

***Shri Sunil Vallyapur***, Member, Legislative Assembly elected to the Thirteenth Assembly from Chincholi (SC)Constituency, No. 42 has tendered his resignation to the Membership of Legislative Assembly and the same has been accepted by the Hon'ble Speaker, Legislative Assembly on 29th January, 2013 (Afternoon). Hence, one seat in the Legislative Assembly has fallen vacant.

***P. Omprakasha***
Secretary
Karnataka Legislative Assembly

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜನವರಿ ೨೯, ೨೦೧೩ (ಮಾಘ ೯, ಶಕ ವರ್ಷ ೧೯೩೪) | ನಂ.೯೫ |
| --- | --- | --- |
| Part – IV-A | Bangalore, Tuesday, January 29, 2013 (Magha 9, Shaka Varsha 1934) | No. 95 |

**ಕರ್ನಾಟಕ ವಿಧಾನಸಭೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ವಿಸಸ/ಶಾರಶಾ/ಸರಾ/789/2013, ಬೆಂಗಳೂರು, ದಿನಾಂಕ: 29ನೇ ಜನವರಿ, 2013**

ಬ್ಯಾಡಗಿ ವಿಧಾನಸಭಾ ಕ್ಷೇತ್ರ ಸಂಖ್ಯೆ: 85 ರಿಂದ ಹದಿಮೂರನೇ ವಿಧಾನಸಭೆಗೆ ಚುನಾಯಿತರಾಗಿದ್ದ ಶ್ರೀ **ಪಾಟೀಲ ಸುರೇಶಗೌಡ್ರ ಬಸಲಿಂಗಗೌಡ್ರ** ಅವರು ವಿಧಾನಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದ್ದು, ಸದರಿ ರಾಜೀನಾಮೆಯನ್ನು ವಿಧಾನಸಭೆಯ ಮಾನ್ಯ ಸಭಾಧ್ಯಕ್ಷರು ದಿನಾಂಕ 29ನೇ ಜನವರಿ 2013ರ ಅಪರಾಹ್ನದಿಂದ ಜಾರಿಗೆ ಬರುವಂತೆ ಅಂಗೀಕರಿಸಿರುತ್ತಾರೆ. ಆದುದರಿಂದ ವಿಧಾನಸಭೆಯಲ್ಲಿ ಒಂದು ಸ್ಥಾನವು ತೆರವಾಗಿರುತ್ತದೆ.

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

***KARNATAKA LEGISLATIVE ASSEMBLY SECRETARIAT***

***NOTIFICATION***

***No: LAS/LEG/MR/789/2013, Bangalore, Dated: 29th January, 2013***

***Shri Patil Sureshgoudra Basalingagoudra***, Member, Legislative Assembly elected to the Thirteenth Assembly from Bydagi Constituency, No. 85 has tendered his resignation to the Membership of Legislative Assembly and the same has been accepted by the Hon'ble Speaker, Legislative Assembly on 29th January, 2013 (Afternoon). Hence, one seat in the Legislative Assembly has fallen vacant.

***P. Omprakasha***
Secretary
Karnataka Legislative Assembly

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜನವರಿ ೨೯, ೨೦೧೩ (ಮಾಘ ೯, ಶಕ ವರ್ಷ ೧೯೩೪) | ನಂ.೯೬ |
| --- | --- | --- |
| Part – IV-A | Bangalore, Tuesday, January 29, 2013 (Magha 9, Shaka Varsha 1934) | No. 96 |

**ಕರ್ನಾಟಕ ವಿಧಾನಸಭೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ವಿಸಸ/ಶಾರಶಾ/ಸರಾ/791/2013, ಬೆಂಗಳೂರು, ದಿನಾಂಕ: 29ನೇ ಜನವರಿ, 2013**

ಹಾವೇರಿ (ಪ.ಜಾ. ಮೀಸಲು) ವಿಧಾನಸಭಾ ಕ್ಷೇತ್ರ ಸಂಖ್ಯೆ: 84 ರಿಂದ ಹದಿಮೂರನೇ ವಿಧಾನಸಭೆಗೆ ಚುನಾಯಿತರಾಗಿದ್ದ ಶ್ರೀ **ನೆಹರು ಚನ್ನಬಸಪ್ಪ ಓಲೇಕಾರ** ಅವರು ವಿಧಾನಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದ್ದು, ಸದರಿ ರಾಜೀನಾಮೆಯನ್ನು ವಿಧಾನಸಭೆಯ ಮಾನ್ಯ ಸಭಾಧ್ಯಕ್ಷರು ದಿನಾಂಕ 29ನೇ ಜನವರಿ 2013ರ ಅಪರಾಹ್ನದಿಂದ ಜಾರಿಗೆ ಬರುವಂತೆ ಅಂಗೀಕರಿಸಿರುತ್ತಾರೆ. ಆದುದರಿಂದ ವಿಧಾನಸಭೆಯಲ್ಲಿ ಒಂದು ಸ್ಥಾನವು ತೆರವಾಗಿರುತ್ತದೆ.

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

***KARNATAKA LEGISLATIVE ASSEMBLY SECRETARIAT***

***NOTIFICATION***

***No: LAS/LEG/MR/791/2013, Bangalore, Dated: 29th January, 2013***

***Shri Nehru Channabasappa Olekar***, Member, Legislative Assembly elected to the Thirteenth Assembly from Haveri (SC) Constituency, No. 84 has tendered his resignation to the Membership of Legislative Assembly and the same has been accepted by the Hon'ble Speaker, Legislative Assembly on 29th January, 2013 (Afternoon). Hence, one seat in the Legislative Assembly has fallen vacant.

***P. Omprakasha***
Secretary
Karnataka Legislative Assembly

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜನವರಿ ೨೯, ೨೦೧೩ (ಮಾಘ ೯, ಶಕ ವರ್ಷ ೧೯೩೪) | ನಂ. ೯೭ |
|---|---|---|
| **Part – IV-A** | ***Bangalore, Tuesday, January 29, 2013 (Magha 9, Shaka Varsha 1934)*** | **No. 97** |


## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂ: ಸಇ 222 ಎಂಆರ್‌ಇ 2012, ಬೆಂಗಳೂರು, ದಿನಾಂಕ:29ನೇ ಜನವರಿ, 2013**

ಸರ್ಕಾರವು ಅಧಿಸೂಚನೆ ಸಂ:ಸಿಎಂಡಬ್ಲ್ಯೂ/08/ಎಂಆರ್‌ಇ/1993(1), ದಿ:21/03/1996ರ ಮೂಲಕ ಬಿಜಾಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರವನ್ನು ವಿಭಜಿಸಿ ಬಿಜಾಪುರ ಮತ್ತು ಬಸವನಬಾಗೇವಾಡಿ ತಾಲ್ಲೂಕುಗಳನ್ನೊಳಗೊಂಡಂತೆ ಬಿಜಾಪುರ ಮಾರುಕಟ್ಟೆ ಕ್ಷೇತ್ರಕ್ಕೆ ಬಿಜಾಪುರದಲ್ಲಿ ಮತ್ತು ಇಂಡಿ, ಸಿಂಧಗಿ ತಾಲ್ಲೂಕುಗಳನ್ನೊಳಗೊಂಡಂತೆ ಸಿಂಧಗಿ ಮಾರುಕಟ್ಟೆ ಕ್ಷೇತ್ರಕ್ಕೆ ಸಿಂಧಗಿಯಲ್ಲಿ 2 ಪ್ರತ್ಯೇಕ ಸ್ವತಂತ್ರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳನ್ನು ಸ್ಥಾಪಿಸಿದೆ.

ಮತ್ತು ಆದಕಾರಣ ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರಿ ಅಧಿಸೂಚನೆಗಳ ಮೂಲಕ ಬಿಜಾಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಈ ಕೆಳಕಂಡಂತೆ ನಮೂದಿಸಿದ ಕೃಷಿ ಉತ್ಪನ್ನಗಳನ್ನು ಮಾರಾಟ ನಿಯಂತ್ರಣಕ್ಕೆ ಒಳಪಡಿಸಲಾಗಿದೆ.

1. ಜಾನುವಾರುಗಳು, 2. ಮೇಕೆಗಳು, 3.ಕುರಿಗಳು, 4.ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), 5. ಎಲ್ಲಾ ಹೂ.ಗಳು, 6.ಸಜ್ಜೆ, 7.ಜವೆ ಗೋಧಿ, 8.ಜೋಳ, 9.ಕಂಬು, 10.ಮೆಕ್ಕೆಜೋಳ, 11.ನವಣೆ, 12.ಭತ್ತ, 13.ರಾಗಿ, 14.ಅಕ್ಕಿ 15.ಸಾಮೆ (ಸಾವೆ), 16.ಗೋಧಿ, 17.ಅಂಟುವಾಳ, 18.ಬೊಂಬು, 19.ಬೆತ್ತ, 20.ಹಿಪ್ಪೆಬೀಜ, 21.ಹೊಂಗೇಬೀಜ, 22.ಬೇವಿನಬೀಜ, 23.ಸೀಗೇಕಾಯಿ, 24.ಹುಣಸೇಹಣ್ಣು, 25.ಹುಣಸೇಬೀಜ, 26.ಸೇಬು, 27.ಬಾಳೆಹಣ್ಣು, 28.ಬೋರೆಹಣ್ಣು, 29.ಹುಳಿಹಣ್ಣುಗಳು, 30.ಚಕ್ಕೋತನ ಹಣ್ಣು, 31.ಪೇರಲೆಹಣ್ಣು (ಸೀಬೆಹಣ್ಣು), 32.ದ್ರಾಕ್ಷಿ, 33.ಹಲಸಿನಹಣ್ಣು, 34.ಜಂಬುನೇರಳೆಹಣ್ಣು, 35.ನಿಂಬೆಹಣ್ಣು, 36.ಕರಬೂಜ, 37.ಮಾವಿನಹಣ್ಣು, 38.ಮೂಸಂಬಿ, 39.ಮರಸೇಬು, 40.ಪೈನಾಪಲ್ (ಅನಾನಸ್), 41.ಪಪ್ಪಾಯಿಹಣ್ಣು (ಪರಂಗಿಹಣ್ಣು), 42.ದಾಳಿಂಬೆಹಣ್ಣು, 43.ಸಪೋಟಾ, 44.ಸಿದ್ದೋಟ, 45.ಕಿತ್ತಳೆ, 46.ಕಲ್ಲಂಗಡಿ, 47.ನೆಲಗಡಲೆ(ಶೇಂಗಾ) (ಕಾಯಿ ಮತ್ತು ಬೀಜ), 48.ಹರಳುಬೀಜ, 49.ಹತ್ತಿಬೀಜ, 50.ಅಗಸೆಬೀಜ, 51.ಸಾಸುವೆ, 52.ಹುಚ್ಚೆಳ್ಳು, 53.ಕುಸುಬೆ, 54.ಎಳ್ಳು, 55.ಸೂರ್ಯಕಾಂತಿಬೀಜ, 56.ಸೋಯಾಬಿನ್, 57.ಅಡಿಕೆ, 58.ಗೋಡಂಬಿಬೀಜ, 59.ಒಣಮೆಣಸಿನಕಾಯಿ, 60.ತೆಂಗಿನಕಾಯಿ, 61.ಕೊಬ್ಬರಿ, 62.ಕೊತ್ತಂಬರಿಬೀಜ (ಧನಿಯಾ), 63.ಬೆಳ್ಳುಳ್ಳಿ, 64.ಶುಂಠಿ, 65.ಮೆಂತ್ಯ, 66.ಕಾಳುಮೆಣಸು, 67.ಅರಿಶಿನ, 68.ಅಲಸಂದೆ(ಇಡೀ ಮತ್ತು ಒಡೆದ), 69.ಅವರೆ (ಇಡೀ ಮತ್ತು ಒಡೆದ), 70.ಕಡಲೆ (ಇಡೀ ಮತ್ತು ಒಡೆದ), 71.ಉದ್ದು (ಇಡೀ ಮತ್ತು ಒಡೆದ), 72.ಬುಲ್ಲರ್ (ಇಡೀ ಮತ್ತು ಒಡೆದ), 73.ಹೆಸರು (ಇಡೀ ಮತ್ತು ಒಡೆದ), 74.ಹುರುಳಿ, 75.ಲಾಕ್ (ಇಡೀ ಮತ್ತು ಒಡೆದ), 76.ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), 77.ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), 78.ಬಟಾಣಿ, 79.ತೊಗರಿ (ಇಡೀ ಮತ್ತು ಒಡೆದ), 80.ಮೋತ್ (ಇಡೀ ಮತ್ತು ಒಡೆದ), 81.ಎಲ್ಲಾ ತರಕಾರಿಗಳು (ಸೊಪ್ಪುಗಳು ಸೇರಿಸಿ)(ಗರ್ಕಿನ್ ಹೊರತುಪಡಿಸಿ), 82.ಕಾಯಿಗಳು, 83.ಹಸಿರುಮೆಣಸಿನಕಾಯಿ, 84.ಈರುಳ್ಳಿ, 85.ಆಲೂಗಡ್ಡೆ, 86.ಸುವರ್ಣಗೆಡ್ಡೆ, 87.ಸಿಹಿಗೆಣಸು (ಗೆಣಸು), 88.ಟೊಮ್ಯಾಟೋ, 89.ವೀಳ್ಯೆದೆಲೆ, 90.ಬೆಲ್ಲ, 91.ತೆಂಗಿನಕಡ್ಡಿ, 92.ಒಣದ್ರಾಕ್ಷಿ.

ಮತ್ತು ಆದಕಾರಣ, ಮೇಲೆ ನಮೂದಿಸಿದ ಕೃಷಿ ಉತ್ಪನ್ನಗಳ ಪರಿಣಾಮಕಾರಿ ಮಾರಾಟ ನಿಯಂತ್ರಣಕ್ಕಾಗಿ ಬಿಜಾಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯನ್ನು ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದಂತೆ ಎರಡು ಪ್ರತ್ಯೇಕ ಕೃಷಿ ಮಾರುಕಟ್ಟೆ ಕ್ಷೇತ್ರಗಳನ್ನಾಗಿ ವಿಭಜಿಸಲು ಕರ್ನಾಟಕ ಸರ್ಕಾರವು ಈಗ ಉದ್ದೇಶಿಸಿದೆ.

ಆದ್ದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 3 ನ್ನು ಓದಿ ಕಲಂ 145(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಬಿಜಾಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರವನ್ನು ವಿಭಜಿಸಿ, ಈ ಕೆಳಗಿನ ಅನುಸೂಚಿಯ 4ನೇ ಅಂಕಣದಲ್ಲಿ ನಮೂದಿಸಿದ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ 3ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ಮಾರುಕಟ್ಟೆ ಕ್ಷೇತ್ರದ ಪರಿಮಿತಿಯನ್ನೊಳಗೊಂಡಂತೆ 2ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ಎರಡು ಪ್ರತ್ಯೇಕ ಮಾರುಕಟ್ಟೆ ಕ್ಷೇತ್ರಗಳನ್ನು ವಿಭಜಿಸಲು ಈ ಮೂಲಕ ಉದ್ದೇಶವನ್ನು ಪ್ರಕಟಿಸಿದೆ.

| ಕ್ರ ಸಂ. | ಮಾರುಕಟ್ಟೆ ಕ್ಷೇತ್ರ | ಮಾರುಕಟ್ಟೆ ಕ್ಷೇತ್ರದ ಪರಿಮಿತಿ | ಕೃಷಿ ಉತ್ಪನ್ನಗಳು |
|---|---|---|---|
| 1 | ಬಿಜಾಪುರ | ಬಿಜಾಪುರ ತಾಲ್ಲೂಕು | 1. ಜಾನುವಾರುಗಳು, 2. ಮೇಕೆಗಳು, 3.ಕುರಿಗಳು, 4.ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), 5. ಎಲ್ಲಾ ಹೂ.ಗಳು, 6.ಸಜ್ಜೆ, 7.ಜವೆ ಗೋಧಿ, 8.ಜೋಳ, 9.ಕಂಬು, 10.ಮೆಕ್ಕೆಜೋಳ, 11.ನವಣೆ, 12.ಭತ್ತ, 13.ರಾಗಿ, 14.ಅಕ್ಕಿ 15.ಸಾಮೆ (ಸಾವೆ), 16.ಗೋಧಿ, 17.ಅಂಟುವಾಳ, 18.ಬೊಂಬು, 19.ಬೆತ್ತ, 20.ಹಿಪ್ಪೆಬೀಜ, 21.ಹೊಂಗೇಬೀಜ, |

| ಕ್ರ ಸಂ. | ಮಾರುಕಟ್ಟೆ ಕ್ಷೇತ್ರ | ಮಾರುಕಟ್ಟೆ ಕ್ಷೇತ್ರದ ಪರಿಮಿತಿ | ಕೃಷಿ ಉತ್ಪನ್ನಗಳು |
|---|---|---|---|
| | | | 22.ಬೇವಿನಬೀಜ, 23.ಸೀಗೇಕಾಯಿ, 24.ಹುಣಸೇಹಣ್ಣು, 25.ಹುಣಸೇಬೀಜ, 26.ಸೇಬು, 27.ಬಾಳೆಹಣ್ಣು, 28.ಬೋರೆಹಣ್ಣು, 29.ಹುಳಿಹಣ್ಣುಗಳು, 30.ಚಕ್ಕೋತನ ಹಣ್ಣು, 31.ಪೇರಲೆಹಣ್ಣು (ಸೀಬೆಹಣ್ಣು), 32.ದ್ರಾಕ್ಷಿ, 33.ಹಲಸಿನಹಣ್ಣು, 34.ಜಂಬುನೇರಳೆಹಣ್ಣು, 35.ನಿಂಬೆಹಣ್ಣು, 36.ಕರಬೂಜ, 37.ಮಾವಿನಹಣ್ಣು, 38.ಮೂಸಂಬಿ, 39.ಮರಸೇಬು, 40.ಪೈನಾಪಲ್ (ಅನಾನಸ್), 41.ಪಪ್ಪಾಯಿಹಣ್ಣು (ಪರಂಗಿಹಣ್ಣು), 42.ದಾಳಿಂಬೆಹಣ್ಣು, 43.ಸಪೋಟಾ, 44.ಸಿದ್ದೋಟ, 45.ಕಿತ್ತಳೆ, 46.ಕಲ್ಲಂಗಡಿ, 47.ನೆಲಗಡಲೆ(ಶೇಂಗಾ) (ಕಾಯಿ ಮತ್ತು ಬೀಜ), 48.ಹರಳುಬೀಜ, 49.ಹತ್ತಿಬೀಜ, 50.ಅಗಸೆಬೀಜ, 51.ಸಾಸುವೆ, 52.ಹುಚ್ಚೆಳ್ಳು, 53.ಕುಸುಬೆ, 54.ಎಳ್ಳು, 55.ಸೂರ್ಯಕಾಂತಿಬೀಜ, 56.ಸೋಯಾಬಿನ್, 57.ಅಡಿಕೆ, 58.ಗೋಡಂಬಿಬೀಜ, 59.ಒಣಮೆಣಸಿನಕಾಯಿ, 60.ತೆಂಗಿನಕಾಯಿ, 61.ಕೊಬ್ಬರಿ, 62.ಕೊತ್ತಂಬರಿಬೀಜ (ಧನಿಯಾ), 63.ಬೆಳ್ಳುಳ್ಳಿ, 64.ಶುಂಠಿ, 65.ಮೆಂತ್ಯ, 66.ಕಾಳುಮೆಣಸು, 67.ಅರಿಶಿನ, 68.ಅಲಸಂದೆ(ಇಡೀ ಮತ್ತು ಒಡೆದ), 69.ಅವರೆ (ಇಡೀ ಮತ್ತು ಒಡೆದ), 70.ಕಡಲೆ (ಇಡೀ ಮತ್ತು ಒಡೆದ), 71.ಉದ್ದು (ಇಡೀ ಮತ್ತು ಒಡೆದ), 72.ಬುಲ್ಲರ್ (ಇಡೀ ಮತ್ತು ಒಡೆದ), 73.ಹೆಸರು (ಇಡೀ ಮತ್ತು ಒಡೆದ), 74.ಹುರುಳಿ, 75.ಲಾಕ್ (ಇಡೀ ಮತ್ತು ಒಡೆದ), 76.ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), 77.ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), 78.ಬಟಾಣಿ, 79.ತೊಗರಿ (ಇಡೀ ಮತ್ತು ಒಡೆದ), 80.ಮೋತ್ (ಇಡೀ ಮತ್ತು ಒಡೆದ), 81.ಎಲ್ಲಾ ತರಕಾರಿಗಳು (ಸೊಪ್ಪುಗಳು ಸೇರಿಸಿ)(ಗರ್ಕಿನ್ ಹೊರತುಪಡಿಸಿ), 82.ಕಾಯಿಗಳು, 83.ಹಸಿರುಮೆಣಸಿನಕಾಯಿ, 84.ಈರುಳ್ಳಿ, 85.ಆಲೂಗಡ್ಡೆ, 86.ಸುವರ್ಣಗೆಡ್ಡೆ, 87.ಸಿಹಿಗೆಣಸು (ಗೆಣಸು), 88.ಟೊಮ್ಯಾಟೋ, 89.ವೀಳ್ಯೆದೆಲೆ, 90.ಬೆಲ್ಲ, 91.ತೆಂಗಿನಕಡ್ಡಿ, 92.ಒಣದ್ರಾಕ್ಷಿ. |
| 2 | ಬಸವನ ಬಾಗೇವಾಡಿ | ಬಸವನ ಬಾಗೇವಾಡಿ ತಾಲ್ಲೂಕು | 1. ಜಾನುವಾರುಗಳು, 2. ಮೇಕೆಗಳು, 3.ಕುರಿಗಳು, 4. ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), 5. ಎಲ್ಲಾ ಹೂ.ಗಳು, 6.ಸಜ್ಜೆ, 7.ಜವೆ ಗೋಧಿ, 8.ಜೋಳ, 9.ಕಂಬು, 10.ಮೆಕ್ಕೆಜೋಳ, 11.ನವಣೆ, 12.ಭತ್ತ, 13.ರಾಗಿ, 14.ಅಕ್ಕಿ 15.ಸಾಮೆ (ಸಾವೆ), 16.ಗೋಧಿ, 17.ಅಂಟುವಾಳ, 18.ಬೊಂಬು, 19.ಬೆತ್ತ, 20.ಹಿಪ್ಪೆಬೀಜ, 21.ಹೊಂಗೇಬೀಜ, 22.ಬೇವಿನಬೀಜ, 23.ಸೀಗೇಕಾಯಿ, 24.ಹುಣಸೇಹಣ್ಣು, 25.ಹುಣಸೇಬೀಜ, 26.ಸೇಬು, 27.ಬಾಳೆಹಣ್ಣು, 28.ಬೋರೆಹಣ್ಣು, 29.ಹುಳಿಹಣ್ಣುಗಳು, 30.ಚಕ್ಕೋತನ ಹಣ್ಣು, 31.ಪೇರಲೆಹಣ್ಣು (ಸೀಬೆಹಣ್ಣು), 32.ದ್ರಾಕ್ಷಿ, 33.ಹಲಸಿನಹಣ್ಣು, 34.ಜಂಬುನೇರಳೆಹಣ್ಣು, 35.ನಿಂಬೆಹಣ್ಣು, 36.ಕರಬೂಜ, 37.ಮಾವಿನಹಣ್ಣು, 38.ಮೂಸಂಬಿ, 39.ಮರಸೇಬು, 40.ಪೈನಾಪಲ್ (ಅನಾನಸ್), 41.ಪಪ್ಪಾಯಿಹಣ್ಣು (ಪರಂಗಿಹಣ್ಣು), 42.ದಾಳಿಂಬೆಹಣ್ಣು, 43.ಸಪೋಟಾ, 44.ಸಿದ್ದೋಟ, 45.ಕಿತ್ತಳೆ, 46.ಕಲ್ಲಂಗಡಿ, 47.ನೆಲಗಡಲೆ(ಶೇಂಗಾ) (ಕಾಯಿ ಮತ್ತು ಬೀಜ), 48.ಹರಳುಬೀಜ, 49.ಹತ್ತಿಬೀಜ, 50.ಅಗಸೆಬೀಜ, 51.ಸಾಸುವೆ, 52.ಹುಚ್ಚೆಳ್ಳು, 53.ಕುಸುಬೆ, 54.ಎಳ್ಳು, 55.ಸೂರ್ಯಕಾಂತಿಬೀಜ, 56.ಸೋಯಾಬಿನ್, 57.ಅಡಿಕೆ, 58.ಗೋಡಂಬಿಬೀಜ, 59.ಒಣಮೆಣಸಿನಕಾಯಿ, 60.ತೆಂಗಿನಕಾಯಿ, 61.ಕೊಬ್ಬರಿ, 62.ಕೊತ್ತಂಬರಿಬೀಜ (ಧನಿಯಾ), 63.ಬೆಳ್ಳುಳ್ಳಿ, 64.ಶುಂಠಿ, 65.ಮೆಂತ್ಯ, 66.ಕಾಳುಮೆಣಸು, 67.ಅರಿಶಿನ, 68.ಅಲಸಂದೆ(ಇಡೀ ಮತ್ತು ಒಡೆದ), 69.ಅವರೆ (ಇಡೀ ಮತ್ತು ಒಡೆದ), 70.ಕಡಲೆ (ಇಡೀ ಮತ್ತು ಒಡೆದ), 71.ಉದ್ದು (ಇಡೀ ಮತ್ತು ಒಡೆದ), 72.ಬುಲ್ಲರ್ (ಇಡೀ ಮತ್ತು ಒಡೆದ), 73.ಹೆಸರು (ಇಡೀ ಮತ್ತು ಒಡೆದ), 74.ಹುರುಳಿ, 75.ಲಾಕ್ (ಇಡೀ ಮತ್ತು ಒಡೆದ), 76.ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), 77.ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), 78.ಬಟಾಣಿ, 79.ತೊಗರಿ (ಇಡೀ ಮತ್ತು ಒಡೆದ), 80.ಮೋತ್<br>2. (ಇಡೀ ಮತ್ತು ಒಡೆದ), 81.ಎಲ್ಲಾ ತರಕಾರಿಗಳು (ಸೊಪ್ಪುಗಳು ಸೇರಿಸಿ) (ಗರ್ಕಿನ್ ಹೊರತುಪಡಿಸಿ), 82. ಕಾಯಿಗಳು, 83.ಹಸಿರುಮೆಣಸಿನಕಾಯಿ, 84.ಈರುಳ್ಳಿ, 85.ಆಲೂಗಡ್ಡೆ, 86.ಸುವರ್ಣಗೆಡ್ಡೆ, 87.ಸಿಹಿಗೆಣಸು (ಗೆಣಸು), 88.ಟೊಮ್ಯಾಟೋ, 89.ವೀಳ್ಯೆದೆಲೆ, 90.ಬೆಲ್ಲ, 91.ತೆಂಗಿನಕಡ್ಡಿ, 92.ಒಣದ್ರಾಕ್ಷಿ. |

ಮೇಲಿನ ಉದ್ದೇಶಿತ ಪ್ರಸ್ತಾವಕ್ಕೆ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966 ರ ಕಲಂ 3 ರನ್ವಯ ಆಕ್ಷೇಪಣೆ / ಸಲಹೆಗಳನ್ನು ಆಹ್ವಾನಿಸಿದ್ದು, ಯಾವುದೇ ಆಕ್ಷೇಪಣೆಗಳು / ಸಲಹೆಗಳು ಇದ್ದಲ್ಲಿ ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಅಥವಾ ಕನ್ನಡ ದಿನಪತ್ರಿಕೆಯಲ್ಲಿ ಯಾವುದರಲ್ಲಿ ತಡವಾಗಿ ಪ್ರಕಟವಾಗುವುದೋ ಆ ದಿನಾಂಕದಿಂದ 30 ದಿವಸದೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಹಕಾರ ಇಲಾಖೆ, ಕರ್ನಾಟಕ ಸರ್ಕಾರ, ಬಹುಮಹಡಿಗಳ ಕಟ್ಟಡ, ಬೆಂಗಳೂರು 560 001 ಇವರಿಗೆ ಸಲ್ಲಿಸಲು ಸೂಚನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಈ. ಪಾಪಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ



| ಭಾಗ - III | ಬೆಂಗಳೂರು, ಬುಧವಾರ, ಜನವರಿ ೩೦, ೨೦೧೩ (ಮಾಘ ೧೦, ಶಕ ವರ್ಷ ೧೯೩೪) | ನಂ.೯೮ |
|---|---|---|
| *Part - III* | *Bangalore, Wednesday, January 30, 2013 (Magha 10, Shaka Varsha 1934* | *No. 98* |



## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ 270 ಸೇಸಕಿ 12, ಬೆಂಗಳೂರು ದಿನಾಂಕ: 30ನೇ ಜನವರಿ, 2013**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಗಳ ಸಹಾಯಕ ಇಂಜಿನಿಯರ್ (ವಿದ್ಯುತ್) ವೃಂದದ ಸೇವಾ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಲೋಇ:53:ಸೇಸಕಿ:08 ದಿನಾಂಕ 20–8–2008ರ ಅನುಬಂಧ–Iರಲ್ಲಿ ದಿನಾಂಕ 1–1–2008 ರಲ್ಲಿದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ 26–8–2008ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ದಿನಾಂಕ 31–12–2012ರ ಪತ್ರದಲ್ಲಿ ಶ್ರೀ ಮಹ್ಮದ್ ಇಬ್ರಾಹಿಂ, ಸಹಾಯಕ ಇಂಜಿನಿಯರ್ (ವಿದ್ಯುತ್), ಲೋಇ ಉಪ ವಿಭಾಗ, ಜೇವರ್ಗಿ ಇವರು ಕಿರಿಯ ಇಂಜಿನಿಯರ್ ಆಗಿ ದಿನಗೂಲಿ ಆಧಾರದ ಮೇಲೆ ದಿನಾಂಕ 1–10–1992 ರಂದು ಸೇವೆಗೆ ಸೇರಿದ್ದು, ದಿನಾಂಕ 30–9–2002ಕ್ಕೆ 10 ವರ್ಷಗಳ ಸೇವೆಯನ್ನು ಪೂರೈಸಿ ದಿನಾಂಕ 1–10–2002 ರಿಂದ ಕ್ರಮಬದ್ಧ ಸೇವೆಯಲ್ಲಿ ವಿಲೀನಗೊಂಡಿದ್ದು ಸದರಿಯವರಿಗೆ ದಿನಾಂಕ 5–9–2007ರ ಜ್ಞಾಪನಾ ಪತ್ರದಲ್ಲಿ ಕಿರಿಯ ಇಂಜಿನಿಯರ್ ಹುದ್ದೆಯಿಂದ ಸಹಾಯಕ ಇಂಜಿನಿಯರ್ ಹುದ್ದೆಗೆ ವೃಂದ ಬದಲಾವಣೆ ಆದೇಶ ಹೊರಡಿಸಿದ್ದು, ಅದರಂತೆ ಸದರಿಯವರು ದಿನಾಂಕ 7–9–2007 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ ಎಂದು ವರದಿ ಮಾಡಿರುತ್ತಾರೆ. ಮುಂದುವರೆದು ಸದರಿ ಇಂಜಿನಿಯರ್‌ರವರ ಹೆಸರು ಸಹಾಯಕ ಇಂಜಿನಿಯರ್ (ವಿದ್ಯುತ್) ವೃಂದದ ದಿನಾಂಕ 20–8–2008 ರ ಜೇಷ್ಠತಾ ಪಟ್ಟಿಯಲ್ಲಿ ಸೇರ್ಪಡೆಗೊಂಡಿಲ್ಲದ ಕಾರಣ ಈಗ ಅವರ ಹೆಸರನ್ನು ಸದರಿ ಜೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ 5 ರಲ್ಲಿ ಸೇರ್ಪಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ)ರವರ ಶಿಫಾರಸ್ಸನ್ನು ಪರಿಶೀಲಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ ಲೋಇ:53:ಸೇಸಕಿ:08 ದಿನಾಂಕ 20–08–2008ರ ಅನುಬಂಧ–Iರಲ್ಲಿ ಪ್ರಚುರಪಡಿಸಿರುವ ಸಹಾಯಕ ಇಂಜಿನಿಯರ್ (ವಿದ್ಯುತ್) ಇವರ ಹೆಸರನ್ನು ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಮೊಹ್ಮದ್ ಇಬ್ರಾಹಿಂ, ಸಹಾಯಕ ಇಂಜಿನಿಯರ್ (ವಿದ್ಯುತ್) ಇವರ ಹೆಸರನ್ನು ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ 5 ರಲ್ಲಿ ಸೇರ್ಪಡೆ ಮಾಡಿ ಕೆಳಕಂಡಂತೆ ನಿಗದಿಪಡಿಸಲು ಉದ್ದೇಶಿಸಲಾಗಿದೆ.

| Sl. no. | Ranking No | Name of the Engineer | Caste | Date of Birth | Date of Entry into service | Date of Regular Appointment to the cadre | Remarks |
|---|---|---|---|---|---|---|---|
| ***1*** | ***2*** | ***3*** | ***4*** | ***5*** | ***6*** | ***7*** | ***8*** |
| ***5*** | ***5*** | ***Mohd ibrahim*** | - | ***1-6-1972*** | ***1-10-2002*** | ***7-9-2007*** | ***DWR/CC*** |

ಸದರಿ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿವಸಗಳೊಳಗಾಗಿ ಭಾದಿತರಾಗಬಹುದಾದ ನೌಕರರು/ಅಧಿಕಾರಿಗಳು ಅವರ ಆಕ್ಷೇಪಣೆ/ ಮನವಿಗಳಿದ್ದಲ್ಲಿ ಸಮರ್ಥನೀಯ ದಾಖಲೆಗಳೊಂದಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು

ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸ ಸೌಧ, 3ನೇ ಮಹಡಿ, ಬೆಂಗಳೂರು 560001 ಇವರಿಗೆ ಸಲ್ಲಿಸಬಹುದಾಗಿದೆ. ನಿಗದಿತ ಅವಧಿಯ ನಂತರ ಸ್ವೀಕೃತವಾದ ಆಕ್ಷೇಪಣೆ/ಸಲಹೆ/ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್.ಮೋಹನ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ)


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – *IV-A* | ಬೆಂಗಳೂರು, ಬುಧವಾರ, ಜನವರಿ ೩೦, ೨೦೧೩ (ಮಾಘ ೧೦, ಶಕ ವರ್ಷ ೧೯೩೪) | ನಂ.೯೯ |
| ***Part – IV-A*** | ***Bangalore, Wednesday, January 30, 2013 (Magha 10, Shaka Varsha 1934*** | ***No. 99*** |


## *RURAL DEVELOPMENT & PANCHAYAT RAJ SECRETARIAT*

### *Notification*

### *No. RDP.98.EGS.2008, Bangalore, Dated: 29th January, 2013*

### *Karnataka State Payment of Unemployment (Amendment-II) Rules–2013*

The draft of the following rules further to amend the Karnataka State Payment of Unemployment Allowance Rules, 2006 which the Government of Karnataka proposes to make in exercises of the powers conferred by section 32 read with sub-section (6) of section 7 of National Rural Employment Guarantee Act, 2005 (Central Act 42 of 2005) and in pursuance to the decision of Ministry of Rural Development Government of India vide Letter No. J-11060/55/2011MGNREGA-IV dt:18.09.2012 is hereby published as required by sub-section (1) of 32 of the said Act, for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the official gazette.

Any objection and suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Rural Development and Panchayat Raj Department, M.S Building, Dr. B.R. Ambedkar Veedi, Bangalore-1.

### *DRAFT RULES*

1. ***Title and Commencement.*** (1) These rules may be called the Karnataka State Payment of Unemployment Allowance (Amendment) Rules, 2013.

   (2) They shall come into force from the date of their publication in the official gazette.

2. ***Amendment of rule 7.*** In the Karnataka State Payment of Unemployment Allowance Rules 2006, in rule 7, for the words "minimum of 100 days" the words "minimum of 100 (one hundred) days or for such period as may be notified by Central Government under sub-section(4) of section 3 of the National Rural Employment Guarantee Act, 2005", shall be substituted.

By order and in the name of the Governor of Karnataka

***Munish Moudgil***
***Director***
Mahatma Gandhi National Rural
Employment Guarantee Scheme
& E/o. Addl. Secretary to Government
Rural Development & Panchayat Raj Dept

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಜನವರಿ ೩೦, ೨೦೧೩ (ಮಾಘ ೧೦, ಶಕ ವರ್ಷ ೧೯೩೪) | ನಂ. ೧೦೦ |
|---|---|---|
| **Part – IV-A** | ***Bangalore, Wednesday, January 30, 2013 (Magha 10, Shaka Varsha 1934)*** | **No. 100** |


## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 58 ಶಾಸನ 2012, ಬೆಂಗಳೂರು, ದಿನಾಂಕ: 30.01.2013**

ಕರ್ನಾಟಕ ನರ್ಸಿಂಗ್ ಮತ್ತು ಅರೆವೈದ್ಯಕೀಯ ವಿಜ್ಞಾನಗಳ ಶಿಕ್ಷಣ (ನಿಯಂತ್ರಣ) ಪ್ರಾಧಿಕಾರ ವಿಧೇಯಕ, 2012ಕ್ಕೆ 2013 ರ ಜನವರಿ ತಿಂಗಳ 28ನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 10 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2013ರ ಕರ್ನಾಟಕ ಅಧಿನಿಯಮ ಸಂಖ್ಯೆ 10**

**(2013ರ ಜನವರಿ ಮೂವತ್ತನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)**

## ಕರ್ನಾಟಕ ನರ್ಸಿಂಗ್ ಮತ್ತು ಅರೆವೈದ್ಯಕೀಯ ವಿಜ್ಞಾನಗಳ ಶಿಕ್ಷಣ (ನಿಯಂತ್ರಣ) ಪ್ರಾಧಿಕಾರ ಅಧಿನಿಯಮ, 2012

(2013ರ ಜನವರಿ ಇಪ್ಪತ್ತೆಂಟನೇ ದಿನಾಂಕದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ)

ನರ್ಸಿಂಗ್, ಅರೆ ವೈದ್ಯಕೀಯ ವಿಜ್ಞಾನಗಳ ಶಿಕ್ಷಣ ಹಾಗೂ ಅವುಗಳಿಗೆ ಸಂಬಂಧಿಸಿದ ಅಥವಾ ಅವುಗಳಿಗೆ ಆನುಷಂಗಿಕವಾದ ವಿಷಯಗಳನ್ನು ನಿಯಂತ್ರಿಸಲು ಒಂದು ಪ್ರಾಧಿಕಾರವನ್ನು ಸ್ಥಾಪಿಸುವುದಕ್ಕಾಗಿ ಉಪಬಂಧವನ್ನು ಕಲ್ಪಿಸಲು ಒಂದು ಅಧಿನಿಯಮ.

ಇಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ ನರ್ಸಿಂಗ್, ಅರೆ ವೈದ್ಯಕೀಯ ವಿಜ್ಞಾನಗಳ ಶಿಕ್ಷಣ ಹಾಗೂ ಅವುಗಳಿಗೆ ಸಂಬಂಧಿಸಿದ ಅಥವಾ ಅವುಗಳಿಗೆ ಆನುಷಂಗಿಕವಾದ ವಿಷಯಗಳನ್ನು ನಿಯಂತ್ರಿಸಲು ಒಂದು ಪ್ರಾಧಿಕಾರವನ್ನು ಸ್ಥಾಪಿಸಲು ಉಪಬಂಧವನ್ನು ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

### ಅಧ್ಯಾಯ – I

### ಪ್ರಾರಂಭಿಕ

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ನರ್ಸಿಂಗ್ ಮತ್ತು ಅರೆ ವೈದ್ಯಕೀಯ ವಿಜ್ಞಾನಗಳ ಶಿಕ್ಷಣ (ನಿಯಂತ್ರಣ) ಪ್ರಾಧಿಕಾರ ಅಧಿನಿಯಮ, 2012 ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಶೈಕ್ಷಣಿಕ ವರ್ಷ" ಎಂದರೆ, ಯಾವುದೇ ನಿರ್ದಿಷ್ಟ ಪ್ರದೇಶಕ್ಕೆ ಅಥವಾ ಯಾವುದೇ ಶಿಕ್ಷಣ ಸಂಸ್ಥೆಗೆ ಅಥವಾ ಶಿಕ್ಷಣ ಸಂಸ್ಥೆಗಳ ವರ್ಗಕ್ಕೆ ಸಂಬಂಧಿಸಿದಂತೆ, ಪ್ರಾಧಿಕಾರವು ಅಧಿಸೂಚನೆ ಮೂಲಕ ನಿರ್ದಿಷ್ಟಪಡಿಸಬಹುದಾದ ಅಂಥ ದಿನಾಂಕದಂದು ಪ್ರಾರಂಭವಾಗುವ ವರ್ಷ;

(ಬಿ) "ಅನುಮೋದಿತ ಶಾಲೆ" ಎಂದರೆ, ಯಾವುದೇ ನಿರ್ದಿಷ್ಟ ಪ್ರದೇಶದಲ್ಲಿರುವ ಮತ್ತು ಅರೆ ವೈದ್ಯಕೀಯ ವಿಜ್ಞಾನಗಳ ಶಿಕ್ಷಣ ಅಥವಾ ನರ್ಸಿಂಗ್ ಶಿಕ್ಷಣ ನೀಡುತ್ತಿರುವ ಹಾಗೂ –

(i) ರಾಜ್ಯ ಸರ್ಕಾರ ಅಥವಾ ಸ್ಥಳೀಯ ಪ್ರಾಧಿಕಾರದ ಆಡಳಿತದ ಅಧೀನದಲ್ಲಿರುವ; ಅಥವಾ

(ii) ಯಾವುದೇ ಇತರ ಆಡಳಿತ ವರ್ಗದ ಅಧೀನದಲ್ಲಿದ್ದು ಪ್ರಾಧಿಕಾರದ ಅಥವಾ ಪ್ರಾಧಿಕಾರವು ಅಧಿಕೃತಗೊಳಿಸಿದ ಅಧಿಕಾರಿಯಿಂದ ಮನ್ನಣೆ ಪಡೆದಿರುವ,

– ಯಾವುದೇ ಶಾಲೆ ಅಥವಾ ಸಂಸ್ಥೆ;

(ಸಿ) "ಪ್ರಾಧಿಕಾರ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಚಿಸಲಾದ ಕರ್ನಾಟಕ ನರ್ಸಿಂಗ್, ಅರೆ ವೈದ್ಯಕೀಯ ವಿಜ್ಞಾನಗಳ ಶಿಕ್ಷಣ (ನಿಯಂತ್ರಣ) ಪ್ರಾಧಿಕಾರ;

(ಡಿ) "ಹಿಂದುಳಿದ ವರ್ಗಗಳು" ಎಂದರೆ, ಭಾರತ ಸಂವಿಧಾನದ (15)ನೇ ಅನುಚ್ಛೇದದ (4)ನೇ ಖಂಡದ ಅಥವಾ ಸಂದರ್ಭಾನುಸಾರ 16ನೇ ಅನುಚ್ಛೇದದ (4)ನೇ ಖಂಡದ ಉದ್ದೇಶಗಳಿಗಾಗಿ ಸರ್ಕಾರವು ಮನ್ನಣೆ ನೀಡಿದ ಸಾಮಾಜಿಕವಾಗಿ ಹಾಗೂ ಶೈಕ್ಷಣಿಕವಾಗಿ ಹಿಂದುಳಿದ ಯಾವುದೇ ನಾಗರೀಕ ವರ್ಗಗಳು;

(ಇ) "ಅಧ್ಯಕ್ಷ" ಎಂದರೆ, ಪ್ರಾಧಿಕಾರದ ಅಧ್ಯಕ್ಷ;

(ಎಫ್) "ಸಕ್ಷಮ ಪ್ರಾಧಿಕಾರ" ಎಂದರೆ, ಈ ಅಧಿನಿಯಮದ ಎಲ್ಲ ಅಥವಾ ಯಾವುದೇ ಉಪಬಂಧಗಳ ಅಡಿಯಲ್ಲಿ ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದ ಅಂಥ ಪ್ರದೇಶಕ್ಕಾಗಿ ಅಥವಾ ಅಂಥ ಉದ್ದೇಶಗಳಿಗಾಗಿ ಅಥವಾ ಸಂಸ್ಥೆಗಳ ಅಂಥ ವರ್ಗಗಳಿಗಾಗಿ ಸಕ್ಷಮ ಪ್ರಾಧಿಕಾರದ ಪ್ರಕಾರ್ಯಗಳನ್ನು ನೆರವೇರಿಸಲು ಮತ್ತು ಕರ್ತವ್ಯಗಳನ್ನು ನಿರ್ವಹಿಸಲು, ಪ್ರಾಧಿಕಾರವು ಅಧಿಸೂಚನೆ ಮೂಲಕ ಅಧಿಕೃತಗೊಳಿಸಿದ ಪ್ರಾಧಿಕಾರದ ಯಾವೊಬ್ಬ ವ್ಯಕ್ತಿ ಅಥವಾ ಅಧಿಕಾರಿ;

(ಜಿ) "ಇಲಾಖೆ" ಎಂದರೆ, ವೈದ್ಯಕೀಯ ಶಿಕ್ಷಣ ಇಲಾಖೆ;

(ಎಚ್) ಖಾಸಗಿ ಶಿಕ್ಷಣ ಸಂಸ್ಥೆಗೆ ಸಂಬಂಧಿಸಿದಂತೆ, "ಶಿಕ್ಷಣ ಏಜೆನ್ಸಿ" ಎಂದರೆ ಅಂಥ ಖಾಸಗಿ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸುವ ಮತ್ತು ಅದರ ಆಡಳಿತ ನಡೆಸುತ್ತಿರುವ ಅಥವಾ ಅದನ್ನು ಸ್ಥಾಪಿಸಲು ಮತ್ತು ಅದರ ಆಡಳಿತ ನಡೆಸಲು ಉದ್ದೇಶಿಸಿರುವ ಅಥವಾ ಅಂಥ ಶಿಕ್ಷಣ ಸಂಸ್ಥೆಯ ಸ್ಥಾಪನೆ, ವ್ಯವಸ್ಥಾಪನೆ, ಆಡಳಿತ ಮತ್ತು ನಿರ್ವಹಣೆಯನ್ನು ವಹಿಸಿಕೊಂಡ ಯಾವೊಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳ ನಿಕಾಯ;

(ಐ) "ಶಿಕ್ಷಣ ಸಂಸ್ಥೆ" ಎಂದರೆ, ನರ್ಸಿಂಗ್ ಅಥವಾ ಅರೆ ವೈದ್ಯಕೀಯ ಶಿಕ್ಷಣ ನೀಡುತ್ತಿರುವ ಯಾವುದೇ ಸಂಸ್ಥೆ ಹಾಗೂ ಖಾಸಗಿ ಶಿಕ್ಷಣ ಸಂಸ್ಥೆಯೂ ಇದರಲ್ಲಿ ಒಳಗೊಳ್ಳುತ್ತದೆ. ಆದರೆ ವಿಶ್ವವಿದ್ಯಾನಿಲಯದ ಅಥವಾ ಕೇಂದ್ರ ಸರ್ಕಾರದ ನೇರ ವ್ಯವಸ್ಥಾಪನೆಗೆ ಒಳಪಟ್ಟಿರುವ ಸಂಸ್ಥೆಗಳು ಇದರಲ್ಲಿ ಒಳಗೊಳ್ಳುವುದಿಲ್ಲ;

(ಜೆ) "ನೌಕರ" ಎಂದರೆ, ಶಿಕ್ಷಣ ಸಂಸ್ಥೆಯಲ್ಲಿ ನೇಮಕಗೊಂಡ ಯಾವೊಬ್ಬ ವ್ಯಕ್ತಿ;

(ಕೆ) "ಕಾರ್ಯನಿರ್ವಹಣಾ ನಿರ್ದೇಶಕರು" ಎಂದರೆ, ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿ;

(ಎಲ್) "ಆಡಳಿತ ಪರಿಷತ್ತು" ಎಂದರೆ, ಖಾಸಗಿ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಲು ಅಥವಾ ನಿರ್ವಹಿಸಲು ಈ ಅಧಿನಿಯಮದ ಅಡಿಯಲ್ಲಿ ಅನುಮತಿಸಲಾದ ಅಥವಾ ಅನುಮತಿಸಲಾಗಿದೆಯೆಂದು ಭಾವಿಸಲಾದ ಯಾವೊಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳ ನಿಕಾಯ ಮತ್ತು ಸದರಿ ಶಿಕ್ಷಣ ಸಂಸ್ಥೆಯ ವ್ಯವಹಾರಗಳನ್ನು ಯಾವ ಆಡಳಿತ ನಿಕಾಯಕ್ಕೆ ವಹಿಸಿಕೊಡಲಾಗಿದೆಯೋ ಅದನ್ನು ಯಾವುದೇ ಹೆಸರಿನಿಂದ ಕರೆಯಲಿ ಆ ಆಡಳಿತ ನಿಕಾಯ ಇದರಲ್ಲಿ ಒಳಗೊಳ್ಳುತ್ತದೆ;

(ಎಂ) "ಸ್ಥಳೀಯ ಪ್ರಾಧಿಕಾರ" ಎಂದರೆ, ಯಾವುದೇ ಸ್ಥಳೀಯ ಪ್ರದೇಶದ ಆಡಳಿತಕ್ಕಾಗಿ ಮತ್ತು ಸ್ಥಳೀಯ ಸ್ವಯಂ ಆಡಳಿತ ಸಂಸ್ಥೆಯಾಗಿ ಪ್ರಕಾರ್ಯಗಳನ್ನು ನಿರ್ವಹಿಸುವುದಕ್ಕಾಗಿ ಕಾನೂನಿನ ಮೂಲಕ ರಾಜ್ಯ ಸರ್ಕಾರವು ಸ್ಥಾಪಿಸಿದ ಪ್ರಾಧಿಕಾರ;

(ಎನ್) "ವ್ಯವಸ್ಥಾಪಕ ಸಮಿತಿ" ಎಂದರೆ, ಖಾಸಗಿ ಶಿಕ್ಷಣ ಸಂಸ್ಥೆಯ ವ್ಯವಸ್ಥಾಪನೆಯನ್ನು ಮತ್ತು ಆಡಳಿತವನ್ನು ಯಾರಿಗೆ ವಹಿಸಲಾಗಿದೆಯೋ ಅಥವಾ ಅದರ ಹೊಣೆ ಯಾರಿಗೆ ವಹಿಸಲಾಗಿದೆಯೋ ಆ ವ್ಯಕ್ತಿ ಅಥವಾ ವ್ಯಕ್ತಿಗಳ ನಿಕಾಯ ಮತ್ತು ಯಾವುದೇ ಸಂಘ, ನ್ಯಾಸ ಅಥವಾ ಸಂಸ್ಥೆಯು ಒಂದಕ್ಕಿಂತ ಹೆಚ್ಚು ಅಂಥ ಸಂಸ್ಥೆಗಳ ವ್ಯವಸ್ಥಾಪನೆಯನ್ನು ನಿರ್ವಹಿಸುತ್ತಿದ್ದಲ್ಲಿ ಅಂಥ ಪ್ರತಿಯೊಂದು ಸಂಸ್ಥೆಯ ವ್ಯವಸ್ಥಾಪಕ ಸಮಿತಿಯೂ ಇದರಲ್ಲಿ ಒಳಗೊಳ್ಳುತ್ತದೆ;

(ಒ) "ವೈದ್ಯಕೀಯ ಶಿಕ್ಷಣ"ವು ಆಧುನಿಕ ವೈದ್ಯ ವಿಜ್ಞಾನದ ಎಲ್ಲ ವಿಭಾಗಗಳು, ಆಯುರ್ವೇದ ವೈದ್ಯ ಪದ್ಧತಿ, ಯುನಾನಿ ವೈದ್ಯ ಪದ್ಧತಿ, ಸಂಯೋಜಿತ ವೈದ್ಯ ಪದ್ಧತಿ, ದೇಶೀ ವೈದ್ಯ ಪದ್ಧತಿ, ಪ್ರಕೃತಿ ಚಿಕಿತ್ಸಾ ಪದ್ಧತಿ, ಸಿದ್ಧ ಅಥವಾ ಹೋಮಿಯೋಪತಿ-ಈ ಮುಂತಾದುವುಗಳ ಶಿಕ್ಷಣವನ್ನು ಒಳಗೊಳ್ಳುತ್ತದೆ;

(ಪಿ) "ಸದಸ್ಯ" ಎಂದರೆ, ಪ್ರಾಧಿಕಾರದ ಸದಸ್ಯ;

(ಕ್ಯೂ) "ಅಲ್ಪ ಸಂಖ್ಯಾತರ ಶಿಕ್ಷಣ ಸಂಸ್ಥೆ" ಎಂದರೆ, ಭಾರತ ಸಂವಿಧಾನದ 30ನೇ ಅನುಚ್ಛೇದದ (1)ನೇ ಖಂಡದ ಅಡಿಯಲ್ಲಿ ಧರ್ಮವನ್ನು ಅಥವಾ ಭಾಷೆಯನ್ನು ಆಧರಿಸಿ ತಮ್ಮ ಇಷ್ಟಾನುಸಾರ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ನಿರ್ವಹಿಸಲು ಹಕ್ಕುಳ್ಳಂಥ ಆಲ್ಪಸಂಖ್ಯಾತರು ಹಾಗೆ ಸ್ಥಾಪಿಸಿ ನಿರ್ವಹಿಸುವಂಥ ಖಾಸಗಿ ಶಿಕ್ಷಣ ಸಂಸ್ಥೆ;

(ಆರ್) "ಅರೆ ವೈದ್ಯಕೀಯ ಶಿಕ್ಷಣ" ಎಂದರೆ, ಲ್ಯಾಬೋರೇಟರಿ ಟೆಕ್ನಾಲಜಿ, x-ರೇ ಟೆಕ್ನಾಲಜಿಯಲ್ಲಿ ನೆರವಾಗುವ ಮತ್ತು ಸಂಬಂಧಿಸಿದ ಆರೋಗ್ಯ ವಿಜ್ಞಾನಗಳು ಮತ್ತು ಸರ್ಕಾರವು ಕಾಲಕಾಲಕ್ಕೆ ಅಧಿಸೂಚಿಸಬಹುದಾದ ಡಿಪ್ಲೊಮೊ ಅಥವಾ ಸರ್ಟಿಫಿಕೇಟ್ ಕೋರ್ಸುಗಳಿಗೆ ಪೂರಕವಾಗುವ ಇತರ ಕೋರ್ಸುಗಳನ್ನು ಒಳಗೊಳ್ಳುತ್ತದೆ;

(ಎಸ್) "ಖಾಸಗಿ ಶಿಕ್ಷಣ ಸಂಸ್ಥೆ" ಎಂದರೆ, ಯಾವೊಬ್ಬ ವ್ಯಕ್ತಿಯು ಅಥವಾ ವ್ಯಕ್ತಿಗಳ ನಿಕಾಯವು ಸ್ಥಾಪಿಸಿದ ಮತ್ತು ಆಡಳಿತ ನಡೆಸುವ ಅಥವಾ ನಿರ್ವಹಿಸಿಕೊಂಡು ಬರುವ ನರ್ಸಿಂಗ್ ಮತ್ತು ಅರೆ ವೈದ್ಯಕೀಯ ಶಿಕ್ಷಣವನ್ನು ನೀಡುವ ಯಾವುದೇ ಶಿಕ್ಷಣ ಸಂಸ್ಥೆ, ಆದರೆ ಇದರಲ್ಲಿ,-

(i) ಕೇಂದ್ರ ಸರ್ಕಾರವು ಅಥವಾ ರಾಜ್ಯ ಸರ್ಕಾರವು ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರವು ಅಥವಾ ಕೇಂದ್ರ ಸರ್ಕಾರವು ಅಥವಾ ರಾಜ್ಯ ಸರ್ಕಾರವು ನಾಮನಿರ್ದೇಶಿಸಿದ ಅಥವಾ ಪ್ರಾಯೋಜಿಸಿದ ಯಾವುದೇ ಇತರ ಪ್ರಾಧಿಕಾರವು ಸ್ಥಾಪಿಸಿದ ಮತ್ತು ಆಡಳಿತ ನಡೆಸುವ ಅಥವಾ ನಿರ್ವಹಿಸುವ ಶಿಕ್ಷಣ ಸಂಸ್ಥೆಗಳು;

(ii) ಕಾನೂನಿನ ಮೂಲಕ ಸ್ಥಾಪಿತವಾದ ಯಾವುದೇ ವಿಶ್ವವಿದ್ಯಾಲಯವು ಸ್ಥಾಪಿಸಿದ ಮತ್ತು ಆಡಳಿತ ನಡೆಸುವ ಶಿಕ್ಷಣ ಸಂಸ್ಥೆ;

(iii) ಅನುಮೋದಿತ ಪಠ್ಯ ವಿಷಯ ಅಥವಾ ವ್ಯಾಸಂಗ ಕ್ರಮ ಅಥವಾ ಸರ್ಕಾರದ ಇಲ್ಲವೇ ವಿಶ್ವವಿದ್ಯಾಲಯದ ಪರೀಕ್ಷೆಗಳಿಲ್ಲದ ಶಿಕ್ಷಣವನ್ನು ನೀಡುವ ಶಿಕ್ಷಣ ಸಂಸ್ಥೆಗಳು,

– ಇದರಲ್ಲಿ ಒಳಗೊಳ್ಳುವುದಿಲ್ಲ;

(ಟಿ) "ಸಾರ್ವಜನಿಕ ಹಿತಾಸಕ್ತಿ" ಎಂಬುವಲ್ಲಿ ಸಾರ್ವಜನಿಕ ಸುವ್ಯವಸ್ಥೆ, ಜನಾರೋಗ್ಯ, ಸಾರ್ವಜನಿಕ ನೈತಿಕತೆ ಮತ್ತು ಅಂಥದೇ ಇತರ ಉದ್ದೇಶಗಳು ಒಳಗೊಳ್ಳುತ್ತವೆ;

(ಯು) "ರ್‍ಯಾಗಿಂಗ್" ಎಂದರೆ, ಯಾವೊಬ್ಬ ವಿದ್ಯಾರ್ಥಿಗೆ ಕ್ರಿಯಾಪೂರ್ಣ ತಮಾಷೆಯಾಗಿ ಅಥವಾ ಇತರ ರೀತಿಯಲ್ಲಿ ಬೆದರಿಕೆ ಒಡ್ಡುವ, ಅಕ್ರಮವಾಗಿ ನಿಗ್ರಹಿಸುವ, ಅಕ್ರಮವಾಗಿ ಬಂಧನದಲ್ಲಿಡುವ ಅಥವಾ ಅವನಿಗೆ ಗಾಯವನ್ನುಂಟುಮಾಡುವ ಅಥವಾ ಅವನ ಮೇಲೆ ಅಪರಾಧಿಕ ಬಲ ಪ್ರಯೋಗ ಮಾಡುವ ಮೂಲಕ ಅಥವಾ ಹಾಗೆ ಬೆದರಿಕೆ ಒಡ್ಡುವ, ಅಕ್ರಮವಾಗಿ ಬಂಧನದಲ್ಲಿಡುವ, ಗಾಯಗೊಳಿಸುವ ಅಥವಾ ಅಪರಾಧಿಕ ಬಲ ಪ್ರಯೋಗ ಮಾಡುವ, ಬೆದರಿಕೆ ಒಡ್ಡುವ ಮೂಲಕ ಮಾನವನ ಘನತೆಗೆ ಕುಂದುಂಟು ಮಾಡುವ ಅಥವಾ ಅವನ ಶರೀರವನ್ನು ಹಿಂಸೆಗೊಳಪಡಿಸುವ ಅಥವಾ ಅವನನ್ನು ಅಪಹಾಸ್ಯಕ್ಕೀಡಾಗುವಂತೆ ಮಾಡುವ ಯಾವುದೇ ಕೃತ್ಯವನ್ನು ಮಾಡುವಂತೆ ಅಥವಾ ಯಾವುದೇ ಕಾನೂನುಬದ್ಧ ಕಾರ್ಯವನ್ನು ಮಾಡದಂತೆ ಮಾಡುವುದು, ಪ್ರೇರೇಪಿಸುವುದು, ಒತ್ತಾಯ ಮಾಡುವುದು ಅಥವಾ ಬಲವಂತ ಮಾಡುವುದು;

(ವಿ) "ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆ" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆ ಮತ್ತು ಸದರಿ ಅಧಿನಿಯಮದ ಅಡಿಯಲ್ಲಿ ಮಾನ್ಯತೆ ಪಡೆದಿದೆ ಎಂದು ಭಾವಿಸಲಾದ ಸಂಸ್ಥೆಯನ್ನು ಒಳಗೊಳ್ಳುತ್ತದೆ;

(ಡಬ್ಲ್ಯೂ) "ಖಾಸಗಿ ಶಿಕ್ಷಣ ಸಂಸ್ಥೆಗೆ ಸಂಬಂಧಿಸಿದಂತೆ ಕಾರ್ಯದರ್ಶಿ" ಎಂದರೆ, ಅವನನ್ನು ಯಾವ ಹೆಸರಿನಿಂದಲಾದರೂ ಕರೆದರೂ ಸರಿಯೆ, ಖಾಸಗಿ ಶಿಕ್ಷಣ ಸಂಸ್ಥೆಯ ನಿಯಮಗಳ ಅಥವಾ ವಿನಿಯಮಗಳ ಅಡಿಯಲ್ಲಿ, ಸಂಸ್ಥೆಯ ವ್ಯವಹಾರಗಳ ವ್ಯವಸ್ಥಾಪನೆಯನ್ನು ವಹಿಸಿಕೊಡಲಾಗಿರುವ ಮುಖ್ಯ ಕಾರ್ಯನಿರ್ವಾಹಕನಾಗಿರುವಂಥ ಯಾವೊಬ್ಬ ವ್ಯಕ್ತಿ;

(ಎಕ್ಸ್) "ಸಂಘ" ಎಂಬುದು ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ, 1960ರ (1960ರ ಕರ್ನಾಟಕ ಅಧಿನಿಯಮ 17) ಅಥವಾ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಅಡಿಯಲ್ಲಿ ನೋಂದಣಿಯಾದ ಸಂಘವನ್ನು ಅಥವಾ ಮುಂಬೈ ನ್ಯಾಸಗಳ ಅಧಿನಿಯಮ, 1950ರ ಅಡಿಯಲ್ಲಿ ನೋಂದಾಯಿತವಾದ ನ್ಯಾಸವನ್ನು ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನ ಅಡಿಯಲ್ಲಿ ನೋಂದಾಯಿತವಾದ ವ್ಯಕ್ತಿಗಳ ಸಂಘವನ್ನು ಒಳಗೊಳ್ಳುತ್ತದೆ;

(ವೈ) "ವಿನಿಯಮ" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ವಿನಿಯಮಗಳು.

## ಅಧ್ಯಾಯ - II

**3. ಪ್ರಾಧಿಕಾರದ ರಚನೆ.–** (1) ಈ ಅಧಿನಿಯಮದ ಪ್ರಾರಂಭದ ತರುವಾಯ ಆದಷ್ಟು ಬೇಗನೆ, ಈ ಅಧಿನಿಯಮದ ಉದ್ದೇಶಗಳಿಗಾಗಿ, ಬೆಂಗಳೂರಿನಲ್ಲಿ ಕೇಂದ್ರ ಸ್ಥಾನವಿರುವ ಕರ್ನಾಟಕ ನರ್ಸಿಂಗ್, ಅರೆ ವೈದ್ಯಕೀಯ ವಿಜ್ಞಾನಗಳ ಶಿಕ್ಷಣ (ನಿಯಂತ್ರಣ) ಪ್ರಾಧಿಕಾರವೆಂದು ಕರೆಯಲ್ಪಡುವ ನರ್ಸಿಂಗ್ ಮತ್ತು ಅರೆವೈದ್ಯಕೀಯ ವಿಜ್ಞಾನಗಳ ಶಿಕ್ಷಣ ನಿಯಂತ್ರಣಕ್ಕಾಗಿ ಒಂದು ಪ್ರಾಧಿಕಾರವನ್ನು ರಚಿಸತಕ್ಕದ್ದು.

(2) ಪ್ರಾಧಿಕಾರವು ಶಾಶ್ವತ ಉತ್ತರಾಧಿಕಾರ ಮತ್ತು ಸಾಮಾನ್ಯ ಮೊಹರನ್ನು ಹೊಂದಿರುವ, ಮೇಲೆ ಹೇಳಿದ ಹೆಸರಿನ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೊಳಗಾಗತಕ್ಕದ್ದು.

(3) ಮಂಡಳಿಯು ಈ ಮುಂದಿನ ಸದಸ್ಯರನ್ನು ಹೊಂದಿರತಕ್ಕದ್ದು, ಎಂದರೆ:–

| | | |
|---|---|---|
| (ಎ) | ವೈದ್ಯಕೀಯ ಶಿಕ್ಷಣದ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿಗಳು | ಅಧ್ಯಕ್ಷರು |
| (ಬಿ) | ಸರ್ಕಾರದ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಪದನಿಮಿತ್ತ ಸದಸ್ಯರು |
| (ಸಿ) | ರಿಜಿಸ್ಟ್ರಾರ್, ಕರ್ನಾಟಕ ನರ್ಸಿಂಗ್ ಪರಿಷತ್ | ಪದನಿಮಿತ್ತ ಸದಸ್ಯರು |
| (ಡಿ) | ರಾಜ್ಯ ಸರ್ಕಾರವು ನಾಮನಿರ್ದೇಶನ ಮಾಡಿದ ನರ್ಸಿಂಗ್ ಶಾಲೆಗಳ ಇಬ್ಬರು ಪ್ರಾಂಶುಪಾಲರು | ಸದಸ್ಯರು |
| (ಇ) | ರಾಜ್ಯ ಸರ್ಕಾರವು ನಾಮನಿರ್ದೇಶನ ಮಾಡಿದ ಅರೆ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗಳ ಇಬ್ಬರು ಪ್ರಾಂಶುಪಾಲರು | ಸದಸ್ಯರು |
| (ಎಫ್) | ಕಾರ್ಯನಿರ್ವಹಣಾ ನಿರ್ದೇಶಕರು | ಸದಸ್ಯ ಕಾರ್ಯದರ್ಶಿ |

**4. ಪದಾವಧಿ ಮತ್ತು ಸೇವಾ ಷರತ್ತುಗಳು.–** (1) ರಾಜ್ಯ ಸರ್ಕಾರದ ಇಚ್ಛೆಗೆ ಒಳಪಟ್ಟು ರಾಜ್ಯ ಸರ್ಕಾರದಿಂದ ನೇಮಿಸಲಾದ ಸರ್ಕಾರೇತರ ಸದಸ್ಯರು ಮೂರು ವರ್ಷಗಳ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು.

(2) ಪದನಿಮಿತ್ತ ಸದಸ್ಯರನ್ನು ಹೊರತು ಪಡಿಸಿದ್ದ, ಸದಸ್ಯರು ತಮ್ಮ ಸಹಿಯೊಂದಿಗೆ ರಾಜ್ಯ ಸರ್ಕಾರಕ್ಕೆ ಪತ್ರ ಬರೆದು ತಮ್ಮ ಹುದ್ದೆಗೆ ರಾಜೀನಾಮೆ ನೀಡಬಹುದು ಆದರೆ, ತನ್ನ ರಾಜೀನಾಮೆಯು ಅಂಗೀಕಾರವಾಗುವವರೆಗೂ ಹುದ್ದೆಯಲ್ಲಿ ಮುಂದುವರಿಯತಕ್ಕದ್ದು.

(3) ಸರ್ಕಾರೇತರ ಸದಸ್ಯರ ಕಚೇರಿಯಲ್ಲಿನ ಆಕಸ್ಮಿಕ ಖಾಲಿ ಹುದ್ದೆಯನ್ನು ಮತ್ತೊಬ್ಬ ವ್ಯಕ್ತಿಯನ್ನು ನಾಮನಿರ್ದೇಶನ ಮಾಡುವ ಮೂಲಕ ರಾಜ್ಯ ಸರ್ಕಾರವು ಭರ್ತಿ ಮಾಡತಕ್ಕದ್ದು ಮತ್ತು ಹಾಗೇ ನಾಮನಿರ್ದೇಶಿತನಾದ ವ್ಯಕ್ತಿಯು ಆತನ ಪೂರ್ವಾಧಿಕಾರಿಯ ಪದದ ಬಾಕಿ ಉಳಿದ ಅವಧಿಯ ವರೆಗೆ ಪದಧಾರಣ ಮಾಡತಕ್ಕದ್ದು;

(4) ಸದಸ್ಯರು ನಿಯಮಿಸಬಹುದಾದ ಅಂತಹ ಭತ್ಯೆಗಳನ್ನು ಸ್ವೀಕರಿಸತಕ್ಕದ್ದು.

(5) ಸದಸ್ಯರುಗಳಿಗೆ ಸಂದಾಯ ಮಾಡಬೇಕಾದ ಭತ್ಯೆಗಳನ್ನು ಪ್ರಾಧಿಕಾರದ ನಿಧಿಯಿಂದ ಭರಿಸತಕ್ಕದ್ದು.

(6) ಪ್ರಾಧಿಕಾರದ ಯಾವುದೇ ಕೃತ್ಯ ಅಥವಾ ವ್ಯವಹರಣೆಯು ಪ್ರಾಧಿಕಾರದ ಯಾವುದೇ ರಿಕ್ತ ಸ್ಥಾನವು ಇರುವುದೆಂಬ ಅಥವಾ ಪ್ರಾಧಿಕಾರದ ರಚನೆಯಲ್ಲಿ ದೋಷವಿದೆಯೆಂಬ ಕಾರಣ ಮಾತ್ರದಿಂದಲೇ ಅಮಾನ್ಯವಾಗತಕ್ಕದ್ದಲ್ಲ.

**5. ಹುದ್ದೆಯ ಸದಸ್ಯತ್ವಕ್ಕೆ ಅನರ್ಹತೆ.**- (1) ಒಬ್ಬ ವ್ಯಕ್ತಿಯು, ಅವನು,-

(ಎ) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ನೈತಿಕ ಅಧಃಪತನವನ್ನೊಳಗೊಳ್ಳುವ ಒಂದು ಅಪರಾಧಕ್ಕಾಗಿ ದೋಷಸಿದ್ಧಿಯಾಗಿದ್ದು, ಕಾರಾವಾಸದ ಶಿಕ್ಷೆಗೆ ಗುರಿಯಾಗಿದ್ದರೆ; ಅಥವಾ

(ಬಿ) ಅಸ್ವಸ್ಥಚಿತ್ತದವನಾಗಿದ್ದು, ಹಾಗೆಂದು ಒಂದು ಸಕ್ಷಮ ನ್ಯಾಯಾಲಯದಿಂದ ಘೋಷಿತನಾಗಿದ್ದರೆ; ಅಥವಾ

(ಸಿ) ಅವಿಮುಕ್ತ ದಿವಾಳಿಯಾಗಿದ್ದರೆ; ಅಥವಾ

(ಡಿ) ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಒಡೆತನ ಅಥವಾ ನಿಯಂತ್ರಣದಲ್ಲಿರುವ ಒಂದು ನಿಕಾಯ ಅಥವಾ ನಿಗಮದ ಸೇವೆಯಿಂದ ತೆಗೆದುಹಾಕಲಾದವನಾಗಿದ್ದರೆ ಅಥವಾ ವಜಾ ಆದವನಾಗಿದ್ದರೆ, ಅಥವಾ

(ಇ) ಪ್ರಾಧಿಕಾರದ ಆದೇಶದಿಂದ ಮಾಡಲಾದ ಯಾವುದೇ ಕಾರ್ಯದಲ್ಲಿ ಅಥವಾ ಪ್ರಾಧಿಕಾರದೊಡನೆ ಅಥವಾ ಅದರ ಅಡಿಯಲ್ಲಿ ಅಥವಾ ಅದರ ಮೂಲಕ ಅಥವಾ ಅದರ ಪರವಾಗಿ ಯಾವುದೇ ಕರಾರು ಅಥವಾ ನಿಯೋಜನೆಯಲ್ಲಿ ಸ್ವತಃ ಅವನು ಅಥವಾ ಅವನ ಪಾಲುದಾರನು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಯಾವುದೇ ಷೇರನ್ನು ಅಥವಾ ಹಿತಾಸಕ್ತಿಯನ್ನು ಹೊಂದಿದ್ದರೆ ;

(ಎಫ್) ಪ್ರಾಧಿಕಾರದ ಪರವಾಗಿ ವೇತನ ಪಡೆಯುವ ನ್ಯಾಯವಾದಿಯಾಗಿ ನಿಯೋಜಿತನಾದರೆ ಅಥವಾ ಪ್ರಾಧಿಕಾರದ ವಿರುದ್ಧವಾಗಿ ನ್ಯಾಯವಾದಿಯ ನಿಯೋಜನೆಯನ್ನು ಒಪ್ಪಿಕೊಂಡಿದ್ದರೆ,

- ಸದಸ್ಯನಾಗಿ ನೇಮಿತನಾಗುವುದಕ್ಕೆ ಮತ್ತು ಸದಸ್ಯನಾಗುವುದಕ್ಕೆ ಅನರ್ಹನಾಗಿರತಕ್ಕದ್ದು.

(2) ಒಬ್ಬ ವ್ಯಕ್ತಿಯು ಪ್ರಾಧಿಕಾರದ ವ್ಯವಹಾರಗಳಿಗೆ ಸಂಬಂಧಪಟ್ಟಂತೆ ಯಾವುದೇ ಜಾಹೀರಾತನ್ನು ಸೇರಿಸುವ ಯಾವುದೇ ವೃತ್ತ ಪತ್ರಿಕೆಯಲ್ಲಿ ಷೇರು ಅಥವಾ ಹಿತಾಸಕ್ತಿಯನ್ನು ಹೊಂದಿದ್ದಾನೆಂಬ ಕಾರಣ ಮಾತ್ರದಿಂದಲೇ (1)ನೇ ಉಪಪ್ರಕರಣ ದ (ಇ) ಮತ್ತು (ಎಫ್) ಖಂಡಗಳ ಅಡಿಯಲ್ಲಿ ಅನರ್ಹನಾಗತಕ್ಕದ್ದಲ್ಲ ಅಥವಾ ಸದರಿ ಖಂಡದ ಅರ್ಥವ್ಯಾಪ್ತಿಯಲ್ಲಿ ಯಾವುದೇ ಕರಾರು ಅಥವಾ ನಿಯೋಜನೆಯಲ್ಲಿ ಯಾವುದೇ ಷೇರು ಅಥವಾ ಹಿತಾಸಕ್ತಿಯನ್ನು ಹೊಂದಿದ್ದಾನೆಂದು ಭಾವಿಸತಕ್ಕದ್ದಲ್ಲ.

**6. ಸದಸ್ಯನನ್ನು ತೆಗೆದುಹಾಕುವುದು.**- (1) ರಾಜ್ಯ ಸರ್ಕಾರವು ಇತರ ಸದಸ್ಯನನ್ನು, ಅವನು,-

(ಎ) 5ನೇ ಪ್ರಕರಣದಲ್ಲಿ ಹೇಳಲಾದ ಯಾವುವೇ ಅನರ್ಹತೆಗಳಿಗೆ ಒಳಪಟ್ಟರೆ:

ಪರಂತು, ಪ್ರಸ್ತಾವದ ವಿರುದ್ಧ ತನ್ನ ಮನವಿಯನ್ನು ಸಲ್ಲಿಸಲು ಅವನಿಗೆ ಒಂದು ಅವಕಾಶವನ್ನು ಕೊಟ್ಟ ಹೊರತು, ಅವನು ಆ ಪ್ರಕರಣದ (1)ನೇ ಉಪ-ಪ್ರಕರಣದ (ಇ) ಖಂಡದಲ್ಲಿ ಹೇಳಲಾದ ಅನರ್ಹತೆಗೆ ಒಳಗಾಗಿದ್ದಾನೆಂಬ ಕಾರಣದ ಮೇಲೆ ತೆಗೆದುಹಾಕತಕ್ಕದ್ದಲ್ಲ; ಅಥವಾ

(ಬಿ) ಅವನು ಕಾರ್ಯವನ್ನು ನಿರ್ವಹಿಸಲು ನಿರಾಕರಿಸಿದರೆ ಅಥವಾ ಕಾರ್ಯವನ್ನು ನಿರ್ವಹಿಸಲು ಅಸಮರ್ಥನಾದರೆ; ಅಥವಾ

(ಸಿ) ಗೈರು ಹಾಜರಾಗಲು ಪ್ರಾಧಿಕಾರದಿಂದ ಅನುಮತಿ ಪಡೆಯದೆ ಪ್ರಾಧಿಕಾರದ ಮೂರು ನಿರಂತರ ಸಭೆಗಳಿಗೆ ಗೈರುಹಾಜರಾದರೆ, ಅಥವಾ

(ಡಿ) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ತನ್ನ ಸ್ಥಾನವನ್ನು ಅವನು ದುರುಪಯೋಗ ಪಡಿಸಿಕೊಂಡಿದ್ದು, ಅವನನ್ನು ಆ ಪದದಲ್ಲಿ ಮುಂದುವರಿಸಿದರೆ ಸಾರ್ವಜನಿಕ ಹಿತಾಸಕ್ತಿಗೆ ಬಾಧಕ ಉಂಟಾಗುವುದೆಂದು ಕಂಡುಬಂದರೆ,

- ಸದಸ್ಯತ್ವದಿಂದ ಅವನನ್ನು ತೆಗೆದುಹಾಕತಕ್ಕದ್ದು:

ಪರಂತು, ಯಾವೊಬ್ಬ ಸದಸ್ಯನನ್ನು ಅವನಿಗೆ ಪ್ರಸ್ತಾವದ ವಿರುದ್ಧ ತನ್ನ ಮನವಿಯನ್ನು ಸಲ್ಲಿಸಲು ಒಂದು ಅವಕಾಶವನ್ನು ಕೊಟ್ಟ ಹೊರತು, ಈ ಖಂಡದ ಅಡಿಯಲ್ಲಿ ತೆಗೆದುಹಾಕತಕ್ಕದ್ದಲ್ಲ.

**7. ಕಾರ್ಯನಿರ್ವಹಣಾ ನಿರ್ದೇಶಕರು.**- (1) ಕಾರ್ಯನಿರ್ವಹಣಾ ನಿರ್ದೇಶಕರು ಪ್ರಾಧಿಕಾರದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು.

(2) ವೈದ್ಯಕೀಯ ಶಿಕ್ಷಣದ ನಿರ್ದೇಶಕರು ಕಾರ್ಯನಿರ್ವಹಣಾ ಸಮಿತಿಯ ಕಾರ್ಯನಿರ್ವಹಣಾ ನಿರ್ದೇಶಕರಾಗಿರತಕ್ಕದ್ದು.

8. **ಪ್ರಾಧಿಕಾರದ ಅಧಿಕಾರಿಗಳು ಮತ್ತು ಸೇವಾ ಷರತ್ತುಗಳು.**- (1) ನಿಯಮಿಸಬಹುದಾದ ಅಂಥ ನಿಯಮಗಳಿಗೊಳಪಟ್ಟು, ಪ್ರಾಧಿಕಾರವು ಅದರ ಪ್ರಕಾರ್ಯಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಅವಶ್ಯವೆಂದು ಭಾವಿಸಬಹುದಾದ ಅಂಥ ಇತರ ಅಧಿಕಾರಿಗಳನ್ನು ಮತ್ತು ನೌಕರರನ್ನು ರಾಜ್ಯ ಸರ್ಕಾರವು ಅಥವಾ ರಾಜ್ಯ ಸರ್ಕಾರವು ಪ್ರಾಧಿಕೃತಗೊಳಿಸಬಹುದಾದ ಅಂಥ ಇತರ ಅಧಿಕಾರಿಯು ನೇಮಕ ಮಾಡಬಹುದು ಅಥವಾ ಪ್ರತಿನಿಯೋಜಿಸಬಹುದು.

(2) ಮೇಲೆ ನಿರ್ದಿಷ್ಟಪಡಿಸಲಾದ ಅಧಿಕಾರಿಗಳ ಮತ್ತು ನೌಕರರ ನೇಮಕಾತಿ ಮತ್ತು ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ನಿಯಮಿಸಬಹುದಾದಂಥವುಗಳಾಗಿರತಕ್ಕದ್ದು:

